# ಚಂದಮಾಮ

ಸಂಸ್ಥಾಪಕರು : 'ಚಕ್ರಪಾಣಿ'
ಸಂಚಾಲಕರು : ನಾಗಿರೆಡ್ಡಿ

ಈ ಸಂಚಿಕೆಯಲ್ಲಿ "ಪಂಚತಂತ್ರ"ದೊಳಗಿನ ಐದನೆಯ ಖಂಡವಾದ "ಅಸಮೀಕ್ಷ ಕಾರಿತ್ವ"ವು ಪ್ರಾರಂಭವಾಗಿದೆ. ಮೇಲು ನೋಟಕ್ಕೆ ಸುಲಭವಾಗಿ ಕಂಡುದನ್ನು ಕೂಡಲೇ ಕಾರ್ಯಗತ ಮಾಡದೆ, ಅದರಲ್ಲಿಯ ಒಳಿತು ಕೆಡುಕುಗಳನ್ನು ತುಲನೆ ಮಾಡಿ ನೋಡಿ, ಕಾರ್ಯಗಳನ್ನು ಮಾಡುವುದೇ ಒಳ್ಳೆಯದೆಂದು, ಈ ಖಂಡದ ಕಥೆಗಳಿಂದ ತಿಳಿಯಬಹುದು. ಹೀಗೆ 'ಪಂಚತಂತ್ರ'ದ ಐದು ಖಂಡಗಳೂ ನಮ್ಮ ಆಯುರಾರೋಗ್ಯಗಳಿಗೆ ಹಿತಕರವಾದ ಶ್ರೀಖಂಡಗಳೇ.

## ಅಮರವಾಣಿ

ಸಹಸ್ರಾಣ್ಯಪಿ ಮೂರ್ಖಾಣಾಂ
ಯದ್ಯುಪಾಸ್ತೇ ಮಹೀಪತಿಃ
ಅಥವಾಪ್ಯಯುತಾನ್ಯೇವ
ನಾಸ್ತಿತೇಷು ಸಹಾಯತಾ ॥ ೧ ॥

ರಾಜನು ಎಷ್ಟು ಸಾವಿರ ಮಂದಿ ಮೂರ್ಖರನ್ನು ಸಂಪಾದಿಸಿದರೂ ಅವರಿಂದ ಸ್ವಲ್ಪವೂ ಉಪಯೋಗವಿರದು.

ಸಂಪುಟ: ೬೨ ಮೇ '೭೯ ಸಂಚಿಕೆ: ೫

ಬಿಡಿ ಪ್ರತಿ ರೂ. ೧-೩೫ :: ವಾರ್ಷಿಕ ಚಂದಾ ರೂ. ೧೫-೦೦





# ಪ್ರಶ್ನೋತ್ತರಗಳು

**ವೈ. ಹೇಮಾಸುಂದರಾವು, ಡೋರ್ನಗಲ್ (ಆಂಧ್ರ)**

ಪ್ರ: ಅರ್ಧರಾತ್ರಿಯಲ್ಲಿ ಸೂರ್ಯನಿರುವ ದೇಶವು ನಾರ್ವೇ ಅನ್ನುವರಷ್ಟೆ? ಅಲ್ಲಿ ಅರ್ಧರಾತ್ರಿಯ ಹೊತ್ತಿನಲ್ಲಿ ಸೂರ್ಯನಿರಲು ಕಾರಣವೇನೆಂದು ಹೇಳುವಿರಾ?

ಉ: ಭೂಮಿ ಸೂರ್ಯನ ಸುತ್ತಲೂ ತಿರುಗುವ ಕಕ್ಷೆಯೊಂದಿದೆ. ಅದರ ಸುತ್ತಲೂ ತಿರುಗುವ "ಇರುಸು" ಆ ಕಕ್ಷೆಗೆ ಇಳಿಜಾರಾಗಿದೆ. ಇದರಿಂದ ಭೂಮಿ ಒಂದು ಸಾರಿ ಸೂರ್ಯನ ಸುತ್ತಲೂ ತಿರುಗಿ ಬರುವ ೧೨ ತಿಂಗಳ ಕಾಲದಲ್ಲಿ ೬ ತಿಂಗಳು ಸೂರ್ಯನು ಉತ್ತರದಲ್ಲಿರುವುದೂ, ಉಳಿದ ೬ ತಿಂಗಳು ದಕ್ಷಿಣದಲ್ಲಿರುವುದೂ ನಮಗೆ ಗೊತ್ತು. ಆ ಕಾಲಗಳನ್ನು ಉತ್ತರಾಯಣ, ದಕ್ಷಿಣಾಯನ ಅನ್ನುತ್ತೇವೆ. ಸೂರ್ಯನು ಪೂರ್ತಿ ಉತ್ತರಕ್ಕೆ ಹೋದಾಗ ಉತ್ತರಧ್ರುವ ಪ್ರಾಂತದ ಸುತ್ತಲೂ ಇರುವ ಪ್ರದೇಶದಲ್ಲಿ ಸೂರ್ಯನು ಅಸ್ತಮಿಸುವುದಿಲ್ಲ. ಉತ್ತರಧ್ರುವ ಮಂಡಲಕ್ಕೆ ಪಕ್ಕದಲ್ಲಿರುವ ದೇಶಗಳಲ್ಲಿ ಕೆಲವು ದಿನಗಳ ವರೆಗೆ "ಅರ್ಧರಾತ್ರಿ"ಯಾದರೂ ಸೂರ್ಯನು ಅಸ್ತಮಿಸುವುದಿಲ್ಲ. ಕೆಲವು ಪ್ರಾಂತಗಳಲ್ಲಿ ಕೆಲವು ಗಂಟೆಗಳಷ್ಟೇ ರಾತ್ರಿ ಇರುತ್ತದೆ. ನಾರ್ವೇಗಿಂತಲೂ ಗ್ರೀನ್ ಲ್ಯಾಂಡಿನ ಹಾಗೆ ಉತ್ತರಧ್ರುವಕ್ಕೆ ಇನ್ನೂ ಸಮೀಪದಲ್ಲಿ ದೇಶಗಳಿವೆ.

**ಕೆ. ಜಿ. ಸರಳಕುಮಾರಿ, ಕೆ. ಜಿ. ಹೇಮಲತ, ಕುಪ್ಪಂ (ಆಂಧ್ರ)**

ಪ್ರ: ಒಬ್ಬರೊಡನೆ ಏನಾದರೂ ಮಾತಾಡಬೇಕಾದರೆ ಮೊದಲು ಪ್ರಧಾನವೆನಿಸುವುದು ಭಾಷೆಯಲ್ಲವೆ? ಅಸಲು ಈ ಭಾಷೆ ಹೇಗೆ ಹುಟ್ಟಿತು? ಯಾವಾಗ? ಇದನ್ನು ವ್ಯಾಪಕಗೊಳಿಸಿದವರು ಯಾರು? ಇಷ್ಟೊಂದು ಭಾಷೆಗಳನ್ನು ಹೇಗೆ ಕಂಡುಹಿಡಿಯಲು ಸಾಧ್ಯವಾಯಿತು?

ಉ: ಭಾಷೆ ಎಂಬುದು ವಸ್ತುಗಳಿಗೂ, ಕೃತಿಗಳಿಗೂ, ಭಾವನೆಗಳಿಗೂ ಸಂಕೇತ. ಧ್ವನಿಗಳನ್ನು ಹೊರಡಿಸಬಲ್ಲ ಪ್ರಾಣಿಗಳು ಕೂಡಾ ಕೆಲವು ಧ್ವನಿಗಳ ಮೂಲಕ ತಮ್ಮ ಭಾವನೆಗಳನ್ನು ತಿಳಿಸಬಲ್ಲವು. ಆಪತ್ತಿನಲ್ಲಿರುವ ಕಾಗೆ ಒಂದು ವಿಧವಾಗಿ ಕೂಗಿ ನೂರಾರು ಕಾಗೆಗಳನ್ನು ಬರಗೊಳಿಸಬಲ್ಲುದು. ಮಾನವರ ನಡುವೆ ಭಾವನೆಯ ವ್ಯಾಪ್ತಿ ಹೆಚ್ಚಾದ ಹಾಗೆ ಭಾಷೆ ಬೆಳೆಯುತ್ತದೆ. ಕಾಡುಜಾತಿಯವರ ಭಾಷೆಗಳಲ್ಲಿ ಬಹಳ ಕಡಿಮೆ ಮಾತುಗಳೇ ಇರುತ್ತವೆ. ಉದಾಹರಣೆಗೆ, ಸವರ ಭಾಷೆಯ ಮಾತುಗಳು ಸಂಕೇತಗಳೆಂಬುದು ತಿಳಿದ ಮೇಲೆ ಅವುಗಳನ್ನು ಅರ್ಥಮಾಡಿಕೊಳ್ಳುವವರೆಲ್ಲ ಸಹಜವಾಗಿ ಆ ಭಾಷೆಗೆ ಸೇರಿದವರೇ ಆಗಿರಬೇಕು. ನಮಗೆ ಗೊತ್ತಿಲ್ಲದ ಭಾಷೆಯಲ್ಲಿ "ಹಾವು" ಎಂದು ಎಚ್ಚರಿಸಿದರೂ ನಮಗೆ ಗೊತ್ತಾಗದು. ಬೇರೆ ಬೇರೆ ಸಮಾಜಗಳು ಬೇರೆ ಬೇರೆ ಭಾಷೆಗಳನ್ನು ಸೃಷ್ಟಿಸಿಕೊಂಡುವು. ಅವುಗಳನ್ನು ಇತರರು ಸಂಪರ್ಕದ ಮೂಲಕ ಕಂಡುಕೊಂಡರು.




## ೭೦

"ಯಾವನು ಹಿಂದು ಮುಂದು ಆಲೋಚನೆ ಮಾಡದೆ ಅವಸರಪಟ್ಟು ಏನಾದರೂ ಮಾಡಿ ಆ ಮೇಲೆ ಪಶ್ಚಾತ್ತಾಪ ಪಡುವನೋ ಅಂತಹವನು ಕ್ಷೌರಿಕ ಮತ್ತು ಮುನಿಗಳ ಕಥೆಯನ್ನು ಕೇಳಿ ಬುದ್ಧಿ ಕಲಿತುಕೊಳ್ಳಬಹುದು. ಹೀಗೆ ಬುದ್ಧಿ ಕಲಿತುಕೊಳ್ಳಬೇಕಾದ ಪಶ್ಚಾತ್ ಬುದ್ಧಿಯವರು ಬಹಳ ಮಂದಿ ಇದ್ದಾರೆ" ಎಂದು ವಿಷ್ಣುಶರ್ಮನು ರಾಜಕುಮಾರರಿಗೆ ಹೇಳಿದನು.

"ಅದೇನು ಕ್ಷೌರಿಕ ಮತ್ತು ಮುನಿಗಳ ಕಥೆ ?" ಎಂದು ರಾಜಕುಮಾರರು ಕೇಳಿದರು. ವಿಷ್ಣುಶರ್ಮನು ಆ ಕಥೆಯನ್ನು ಹೇಳಿದನು :

ಒಂದು ಕಾಲದಲ್ಲಿ ಪಾಟಲೀಪುತ್ರವೆಂಬ ನಗರದಲ್ಲಿ ಮಣಿಭದ್ರನೆಂಬ ದೊಡ್ಡ ವರ್ತಕನಿದ್ದನು. ಅವನು ಯಾವಾಗಲೂ ದಾನಧರ್ಮಗಳಿಗೂ, ಮತ ಕಾರ್ಯ ಕಲಾಪಗಳಿಗೂ, ದೇವತಾರಾಧನೆಗಳಿಗೂ ಲಕ್ಷ ಗಟ್ಟಲೆ ಹಣ ಖರ್ಚು ಮಾಡುತ್ತಾ ಇದ್ದನು. ಕಳಿಂಗ ಪಟ್ಟಣ, ಕಾರೈಕಾಲು ಮೊದಲಾದ ದೊಡ್ಡ ದೊಡ್ಡ ರೇವು ಪಟ್ಟಣಗಳಲ್ಲಿ ಅವನ ವ್ಯಾಪಾರವು ಭಾರಿಯಾಗಿ ನಡೆಯುತ್ತಿತ್ತು. ಅವನ ವರ್ತಕ ನೌಕೆಗಳು ಬಂಗಾಳಾ ಖಾತವನ್ನು ದಾಟಿ ವಿದೇಶಗಳಿಗೆಲ್ಲ ಹೋಗುತ್ತಿದ್ದುವು.

ಒಂದು ಸಾರಿ ದುರದೃಷ್ಟವಶಾತ್ ಅವನ ನೌಕೆಗಳೆಲ್ಲಾ ಬಂಗಾಳಾಕೊಲ್ಲಿಯಲ್ಲಿರುವಾಗ ಸಮುದ್ರದಲ್ಲಿ ತೀವ್ರವಾದ ಉಬ್ಬರವೆದ್ದು, ಒಂದು ನೌಕೆಯೂ ಉಳಿಯದಂತೆ ಎಲ್ಲಾ ಮುಳುಗಿ ಹೋದುವು. ಒಮ್ಮೆಗೇ ಮಣಿಭದ್ರನು ಪೂರ್ತಿ ಬಡವನಾದನು. ನಿನ್ನೆ ಕೋಟೀಶ್ವರನಾಗಿದ್ದವನು ಮಾರನೇ ದಿನ ಬಿಕಾರಿಯಾದನು, ಅದುವರೆಗೂ ಅವನ ದಯಾ ಕಟಾಕ್ಷಕ್ಕಾಗಿ ಸುಳಿದಾಡಿಕೊಂಡಿದ್ದ ಧನಿಕರು ಅವನ ಕಡೆಗೆ ನೋಡುವುದನ್ನೂ ಬಿಟ್ಟರು. ಅವನನ್ನು ಔತಣಗಳಿಗೆ ಆಹ್ವಾನಿಸುವುದನ್ನೂ ನಿಲ್ಲಿಸಿದರು. ಅಷ್ಟುಮಾತ್ರವಲ್ಲದೆ ಅವನೂ ಅವನ ಹೆಂಡತಿಯೂ ಅಸಹನೀಯವಾದ ಅವಮಾನಗಳಿಗೆ ಗುರಿಯಾಗಬೇಕಾಗಿಬಂದಿತು. ಉದಾರವಾಗಿದ್ದ ಮಣಿಭದ್ರನ ಮನಸ್ಸು ಮುಂದೇನೆಂಬ ಚಿಂತೆಯಿಂದ ತುಂಬಿ ಹೋಯಿತು. ಅವನೂ ಅವನ ಹೆಂಡತಿಯೂ ಸಮಸ್ತ ಸೌಖ್ಯಗಳಲ್ಲಿ ತೇಲಾಡಿಕೊಂಡಿದ್ದವರಾದುದ



ರಿಂದ ಊಹಿಸಲಾಗದ ಈ ದಾರಿದ್ರ್ಯದ ಸಂಕಟಗಳು ಸಹಿಸಲಸಾಧ್ಯವಾಗಿ ತೋರಿದುವು. ಅವನು ಸ್ವಂತ ದಲ್ಲಿ ಎಂತಹ ಕಷ್ಟಗಳನ್ನಾದರೂ ಸಹಿಸಿಕೊಳ್ಳಬಲ್ಲ ನಾದರೂ, ತನ್ನ ಹೆಂಡತಿಯೂ ಆ ಕಷ್ಟಗಳಿಗೆ ಗುರಿಯಾಗಬೇಕಾಗಿರುವುದನ್ನು ಅವನಿಂದ ತಾಳಲಾಗ ಲಿಲ್ಲ. ಅವಳು ಅಪಾರಬೆಲೆಬಾಳುವ ಚೀನಾಂಬರ ಗಳನ್ನು ಧರಿಸಿಕೊಂಡಿದ್ದವಳು. ದಿನಾ ಲೆಕ್ಕವಿಲ್ಲದಷ್ಟು ದಾನಗಳನ್ನು ಮಾಡುವವಳು, ಎಲ್ಲಾ ಋತು ಗಳಲ್ಲಿಯೂ ಅವಳಿಗೆ ಪುಟ್ಟಿಪುಟ್ಟಿಯಾಗಿ ಪುಷ್ಪಗಳು ಸಿಗುತ್ತಿದ್ದವು,

ಈಗ ಅವೇನೂ ಸಿಗುವ ದಾರಿಯಿಲ್ಲದೆ ಅವಳು ನಿರ್ಬಂಧದಲ್ಲಿರಿಸಿದ ಆನೆಯ ಹಾಗೆ ಒಳಗೊಳಗೇ ಚಡಪಡಿಸಿಕೊಂಡಿದ್ದಾಳೆ. ತನ್ನ ಗಂಡನನ್ನು ಉತ್ಸಾಹ ಪಡಿಸಲಿಕ್ಕಾಗಿ ತನ್ನ ಸಂಕಟಗಳನ್ನು ಮುಚ್ಚಿಟ್ಟು ಕೊಳ್ಳಲು ವ್ಯರ್ಥ ಪ್ರಯತ್ನ ಮಾಡುತ್ತಿರುವುದನ್ನು ನೋಡುವಾಗ ಅವನ ಮನಸ್ಸು ಕರಗಿ ಹೋಗುತ್ತಿತ್ತು.

ಒಂದು ದಿನ ರಾತ್ರಿ ಹೆಂಡತಿ ಏನೋ ಮನೆಗೆಲಸ ದಲ್ಲಿ ನಿಮಗ್ನಳಾಗಿದ್ದಾಗ, ಅವಳನ್ನೇ ನೋಡುತ್ತಾ ಮಲಗಿಕೊಂಡಿದ್ದ ಮಣಿಭದ್ರನು ತನ್ನೊಳಗೆ ಏನೇನೋ ಆಗಲಿರುವುದನ್ನು ಊಹಿಸುತ್ತಾ, ಹೀಗೆ ಆಲೋಚನೆ ಹರಿಯಬಿಟ್ಟನು :

"ಮನುಷ್ಯನಿಗೆ ದಾರಿದ್ರ್ಯದಷ್ಟು ಕೆಟ್ಟದ್ದು ಯಾವುದೂ ಇಲ್ಲ. ಒಳ್ಳೆಯತನ, ಒಳ್ಳೆಯ ನಡತೆ, ತಾಳ್ಮೆ, ಶಾಂತತೆ, ಕುಲೀನತೆ ಇವಾವುದೂ ದರಿದ್ರ ನಲ್ಲಿ ಬೆಳಗುವುದಿಲ್ಲ. ಮಾನ, ಗೌರವ, ದರ್ಪ, ವಿಜ್ಞಾನ, ಅಂದ ಚೆಂದ, ವಿವೇಕ ಮುಂತಾದುವೆಲ್ಲ ದಾರಿದ್ರ್ಯದಿಂದ ಬಳಿದು ಹೋಗಿ ಬಿಡುತ್ತವೆ. ದಿನಾ ಬೆಳಗಾದರೆ ಹೇಗೆ ಆ ದಿನವನ್ನು ಕಳೆಯುವುದೋ ಎಂಬ ಆವೇದನೆಯಲ್ಲಿ ಎಷ್ಟು ದೊಡ್ಡ ಬುದ್ಧಿವಂತನ ಬುದ್ಧಿಯಾದರೂ ಗಡ್ಡೆಗಟ್ಟಿ ಹೋಗುತ್ತದೆ. ಒಬ್ಬ ಧನಿಕನ ಆಶ್ರಯದಲ್ಲಿ ಸಾವಿರ ಮಂದಿ ದರಿದ್ರರಿರ ಬಹುದು. ಆದರೆ ಲೋಕಕ್ಕೆ ಧನಿಕನು ಕಾಣುವಷ್ಟು ನಿಚ್ಚಳವಾಗಿ ದರಿದ್ರನು ಕಾಣಲಾರನು. ಪ್ರಪಂಚಕ್ಕೆ ಧನದ ಹೊರತು ಬೇರೆಯಾವುದೂ ಹಿಡಿಸದು. ದರಿದ್ರನು ಯಾವನನ್ನಾದರೂ ಕೊಂದರೆ ಅಪರಾಧ ವೆನಿಸುತ್ತದೆ; ಧನಿಕನಿಂದ ಯಾವನಾದರೂ ಕೊಲೆ ಯಾದರೆ ಅಪರಾಧವಾಗದು. ಇನ್ನು ನನಗೆ ಈ ಜನ್ಮದಿಂದ ಪ್ರಯೋಜನವೇನಾದರೂ ಇದೆಯೋ ? ಇಲ್ಲ, ನಾಳೆಯೋ ನಾನು ದೂರ ಅರಣ್ಯದೊಳಗೆ ಹೋಗಿ ಉರುಳು ಹಾಕಿಕೊಂಡು ಆತ್ಮಹತ್ಯ ಮಾಡಿ ಕೊಂಡು ಬಿಡುತ್ತೇನೆ. ನನ್ನ ಶವವನ್ನು ನೋಡಿ ಅಳುವಂತಹ ಸಂದರ್ಭ ನನ್ನ ಹೆಂಡತಿಗೆ ಬರುವುದಿಲ್ಲ. ನಾನು ಧನ ಸಂಪಾದನೆಗಾಗಿ ಯಾವ ದೇಶಾಂತರಕ್ಕೆ ಹೋದೆನೋ ಎಂದು ಕೊಳ್ಳುತ್ತಾಳೆ. ಆ ವಿಧವಾಗಿ ಅವಳಿಗೆ ವೈಧವ್ಯದ ಉಪದ್ರವಗಳೂ ತಪ್ಪುತ್ತವೆ, ಅವಳು ತನ್ನ ತೌರು ಮನೆಗೆ ಹೋಗಿ ಅಲ್ಲಿ ಸುಖ ವಾಗಿ ಬದುಕಿಕೊಂಡಿರಬಹುದು. ನಾನಿರುವಾಗ



ಮಾತ್ರ ಅವಳು ಅಲ್ಲಿಗೆ ಹೋಗಲಾರಳು. ನಾನು ಇಲ್ಲದೇ ಹೋದರೆ ಅಲ್ಲಿಗೆ ಹೋಗದೆ ಅವಳಿಗೆ ಬೇರೆ ಗತಿ ಇಲ್ಲ. ಆದುದರಿಂದ ನಾನು ಪತ್ತೆಹತ್ತದಂತೆ ಸಾಯುವುದೇ ಒಳ್ಳೆಯದು."

ಹೀಗೆ ಅಂದುಕೊಂಡು ಮಣಿಭದ್ರನು ಹಾಗೆಯೇ ನಿದ್ರೆಗೆ ಜಾರಿಕೊಂಡನು. ಆ ರಾತ್ರಿಯ ನಿದ್ದೆಯಲ್ಲಿ ಅವನಿಗೊಂದು ವಿಚಿತ್ರವಾದ ಸ್ವಪ್ನವು ಕಂಡಿತು. ಆ ಸ್ವಪ್ನದಲ್ಲಿ ದಿಗಂಬರನಾದ ಜೈನನೊಬ್ಬನು ಪ್ರತ್ಯಕ್ಷನಾಗಿ ಮಣಿಭದ್ರನನ್ನು ನೋಡಿ, "ಮಣಿಭದ್ರಾ, ಆತ್ಮಹತ್ಯೆ ಮಾಡಿಕೊಳ್ಳುವ ಆಲೋಚನೆಯನ್ನು ಬಿಟ್ಟುಬಿಡು. ಕಳೆದ ಜನ್ಮದಲ್ಲಿ ಮಾಡಿದ ಕರ್ಮಗಳು ಒಂದೊಂದು ಸಾರಿ ಫಲಿಸುವುದಿಲ್ಲವೆಂದು ಕಂಡರೂ ತಪ್ಪದೆ ಫಲಿಸುತ್ತವೆ. ಕಳೆದ ಜನ್ಮದಲ್ಲಿ ಒಬ್ಬ ದಿಗಂಬರ ಜೈನ ಮುನಿ ಬಡವರಿಗೆ ದಾನ ಮಾಡಲಿಕ್ಕಾಗಿ ನಿನ್ನನ್ನು ಬೇಡಿದಾಗ ನೀನು ಒಂದು ಲಕ್ಷ ಬಂಗಾರದ ಮೊಹರಿಗಳನ್ನು ಅವನಿಗೆ ಕೊಟ್ಟಿರುವೆ. ಆ ದಿಗಂಬರ ಮುನಿ ನಾನೇ. ನಿನ್ನ ಕೈಯಿಂದ ತೆಗೆದುಕೊಂಡ ಆ ಬಂಗಾರದ ಮೊಹರಿಗಳಿಂದಾಗಿ ನಾನು ಆಶೆಯ ಕಳಂಕಕ್ಕೆ ಒಳಗಾಗಿ ಅದನ್ನು ಯಾರಿಗೂ ಕೊಡದೆ, ಮೊದಲಿನಂತೆ ದೇವರನ್ನೂ ಧರ್ಮವನ್ನೂ ನೆನೆಯುವುದನ್ನು ಬಿಟ್ಟು ಬಂಗಾರದ ಮೊಹರಿಗಳನ್ನು ನೋಡುತ್ತ ನನ್ನೊಳಗೆ ನಾನೇ ಸಂತೋಷ ಪಟ್ಟುಕೊಂಡಿದ್ದೆ. ಮನಸ್ಸು ಯಾವುದರ ಮೇಲೆ ಸಂಲಗ್ನವಾಗುವುದೋ ಅದೇರೂಪ ಮೂರ್ತಿಮಂತವಾಗುವುದೆಂದು ಹೇಳುತ್ತಾರೆ. ಅದು ನಿಜವಾಗಿ ನಾನು ಬಹಿರಂಗದಲ್ಲಿ ದಿಗಂಬರ ಮುನಿಯಾಗಿ ಕಂಡರೂ ಬಂಗಾರದ ಮನುಷ್ಯನಾಗಿಬಿಟ್ಟೆನು. ನನಗೀಗ ಬುದ್ಧಿ ಬಂದಿದೆ. ಬಂಗಾರದ ಮೇಲೆ ಸ್ವಲ್ಪವೂ ಆಶೆ ಇಲ್ಲ. ಆದರೂ ಈ ಬಂಗಾರದ ಮನುಷ್ಯ ನನ್ನನ್ನು ಬಿಡುವುದಿಲ್ಲ. ಅವನು ಸತ್ತ ಹೊರತು ನನಗೆ ವಿಮೋಚನೆ ಇಲ್ಲ. ನೀನು ಕೊಟ್ಟ ಬಂಗಾರ ನಿನಗೇ ಹಿಂದಿರುಗಿ ಸೇರಬೇಕು. ಆದುದರಿಂದ ನಾನು ನಾಳೆ ಬೆಳಿಗ್ಗೆ ಇದೇ ರೂಪದಲ್ಲಿ ನಿನ್ನ ಬಳಿಗೆ ಬರುತ್ತೇನೆ. ನನ್ನನ್ನು ನೀನು ಸುಲಭವಾಗಿ ಗುರ್ತಿಸಬಹುದು. ಏಕೆಂದರೆ ನನ್ನ ಕೈಯಲ್ಲಿ ಭಿಕ್ಷಾಪಾತ್ರೆ ಇರಲಾರದು. ಭಿಕ್ಷಾಂದೇಹಿ ಎಂದು ಹೇಳಲಾರೆನು. ಸುಮ್ಮನೆ ನಿಂತಿರುತ್ತೇನೆ. ನೀನು ಸ್ವಲ್ಪವೂ ಸಂಕೋಚ ಪಡದೆ ನನ್ನ ನಡುನೆತ್ತಿಯ ಮೇಲೆ ದೊಣ್ಣೆಯಿಂದ ಬಲವಾಗಿ ಹೊಡೆ. ಆ ಪೆಟ್ಟಿನಿಂದ ನಾನು ಎರಡು ಮಣಭಾರವಾದ ಬಂಗಾರದ ವಿಗ್ರಹವಾಗಿ ಬದಲಾಯಿಸುತ್ತೇನೆ. ನೀನು ನನಗೆ ಕೊಟ್ಟ ಬಂಗಾರದ ಮೊಹರಿಗಳು ಅಷ್ಟೇ ಭಾರ. ಆ ಬಂಗಾರದಿಂದ ನೀನೂ ನಿನ್ನ ಹೆಂಡತಿಯೂ ಹಿಂದಿನಂತೆಯೇ ಸುಖವಾಗಿ ಬದುಕಿರಬಹುದು. ಒಂದು ಲೆಕ್ಕದಲ್ಲಿ ನಿನಗೆ ದಾರಿದ್ರ್ಯ ಬಂದದ್ದೂ ಒಳ್ಳೇದಾಯಿತು. ಇದರಿಂದ ಮಾನವರನ್ನು ಕುರಿತು, ಪ್ರಪಂಚವನ್ನು ಕುರಿತು ನಿಜವನ್ನು ತಿಳಿದುಕೊಂಡು, ವಿವೇಕವನ್ನು ಬೆಳೆಸಿ

ಕೊಂಡಿರುವಿ. ಇನ್ನು ನಾನು ಹಿಂದಿನಂತೆ ನಿಜವಾದ ಜೈನ ಮುನಿಯಾಗಿ, ದೇವಲೋಕವನ್ನು ಸೇರಿ ನಿರ್ವಿಘ್ನವಾಗಿ ತಪಸ್ಸುಮಾಡಿಕೊಳ್ಳುತ್ತೇನೆ" ಎಂದು ಹೇಳಿ ಮಾಯವಾಗಿ ಹೋದನು.

ಮಣಿಭದ್ರನು ತಟ್ಟನೆ ನಿದ್ದೆಯಿಂದ ಎಚ್ಚೆತ್ತು, ಈ ವಿಚಿತ್ರ ಸ್ವಪ್ನವನ್ನು ಕುರಿತು ಹೀಗೆ ಹೇಳಿಕೊಂಡನು:

"ಎಂಥ ಸ್ವಪ್ನವಿದು ? ಇದು ನಿಜವಾಗುವುದೆಂದು ನಂಬುವುದು ಮೂರ್ಖತನವಾದೀತು. ನಿದ್ದೆ ಬರುವುದಕ್ಕೆ ಮೊದಲು ಧನವನ್ನು ಕುರಿತೇ ಆಲೋಚಿಸಿಕೊಂಡಿದ್ದುದರಿಂದ, ಬಹುಶಃ ಇದೊಂದು ಅರ್ಥವಿಲ್ಲದ ಸ್ವಪ್ನವೇ ಆಗಿರಬೇಕು. ರೋಗದಲ್ಲಿರುವವನಿಗೂ, ದುಃಖದಲ್ಲಿರುವವನಿಗೂ, ವಿಚಾರಹಿಡಿದವನಿಗೂ, ಪ್ರೇಮದಲ್ಲಿಬಿದ್ದವನಿಗೂ, ಕುಡಿದು ಮೈಮರೆತವನಿಗೂ ಕಾಣುವ ಸ್ವಪ್ನವು ಎಂದಿಗೂ ನಿಜವಾಗದು ಅನ್ನುತ್ತಾರೆ. ಆದರೂ ಬೆಳಗಾದ ಕೂಡಲೇ ಗೊತ್ತಾಗಿಬಿಡುತ್ತದಷ್ಟೆ ?"

ಆಮೇಲೆ ಮಣಿಭದ್ರನಿಗೆ ನಿದ್ದೆ ಬರಲಿಲ್ಲ. ಬೆಳಂಜಾವದಲ್ಲಿಯೇ ಎದ್ದು ಸ್ನಾನಮಾಡಿ, ಪೂಜೆ ಮುಗಿಸಿ ಮನೆಯ ಮುಂದೆ ಜಗಲಿಯ ಮೇಲೆ ಕುಳಿತುಕೊಂಡನು. ಅವನ ಪಕ್ಕದಲ್ಲಿ ಗಟ್ಟಿ ತಿರುಳು ಮರದಿಂದ ಮಾಡಲ್ಪಟ್ಟ ದೊಣ್ಣೆಯೊಂದು ಸಿದ್ಧವಾಗಿದ್ದಿತು.

ಆ ಸಮಯದಲ್ಲಿ ಪರಿಚಯದ ಕ್ಷೌರಿಕನೊಬ್ಬನು ಬಂದು ಮಣಿಭದ್ರನ ಹೆಂಡತಿಯ ಕಾಲಿನ ಉಗುರುಗಳನ್ನು ತೆಗೆದನು. ಅವನ ಕೆಲಸ ಮುಗಿದ ಮರುಕ್ಷಣದಲ್ಲಿ ಒಬ್ಬ ಜೈನಮುನಿ ಭಿಕ್ಷಾಪಾತ್ರವೇ ಇಲ್ಲದೆ ಬಂದು, ಭಿಕ್ಷೆ ಕೂಡಾ ಕೇಳದೆ ಮಣಿಭದ್ರನನ್ನು ನೋಡುತ್ತ ಸುಮ್ಮನೆ ನಿಂತನು.

ಮಣಿಭದ್ರನು ಅವನನ್ನು ನೋಡಿ, ತನಗೆ ಸ್ವಪ್ನದಲ್ಲಿ ಕಾಣಿಸಿದ ಮುನಿ ಇವನೇ ಎಂದು ದೃಢಪಡಿಸಿಕೊಂಡನು. ಕೂಡಲೇ ಪಕ್ಕದಲ್ಲಿದ್ದ ದೊಣ್ಣೆಯನ್ನೆತ್ತಿ, ಅವನ ನಡುನೆತ್ತಿಯ ಮೇಲೆ ಬಲವಾಗಿ ಒಂದೇಟು ಹಾಕಿಬಿಟ್ಟನು.

ಆ ಜೈನ ಮುನಿ ಸದ್ದಿಲ್ಲದೆ ನೆಲಕ್ಕೆ ಬಿದ್ದು ಬಂಗಾರದ ವಿಗ್ರಹವಾಗಿ ಬದಲಾಯಿಸಿದನು. ಇದನ್ನು ನೋಡಿ ಮಣಿಭದ್ರನ ಹೆಂಡತಿಯೂ, ಕ್ಷೌರಿಕನೂ ಬೆರಗಾಗಿ ಸ್ತಂಭಿಸಿ ನಿಂತರು.

ಮಣಿಭದ್ರನು ಆನಂದಬಾಷ್ಪ ಸುರಿಸುತ್ತ, ತನ್ನ ಹೆಂಡತಿಯ ಸಹಾಯದಿಂದ ಆ ಬಂಗಾರದ ವಿಗ್ರಹವನ್ನು ಮನೆಯೊಳಗೆ ಸೇರಿಸಿ, ಆ ವಿಗ್ರಹದ ಒಂದು ಬೆರಳನ್ನು ತುಂಡು ಮಾಡಿ ಕ್ಷೌರಿಕನಿಗೆ ಕೊಟ್ಟು "ಎಲೋ, ಇದರಿಂದ ಆನಂದ ಔತಣ ಮಾಡಿಕೋ. ಈ ಸಂಗತಿ ಮಾತ್ರ ಯಾರಿಗೂ ಹೇಳಬೇಡ!" ಎಂದು ಎಚ್ಚರಿಸಿದನು.





# ಸೈನಿಕನ ವರ್ತನೆ

ಕಥೆಯನ್ನು ಹೇಳಿ ಸಮಸ್ಯೆಯೊಡ್ಡುವ ಬೇತಾಳಕ್ಕಿಂತ ತಾನೇನೂ ಕಡಿಮೆಯವನಲ್ಲವೆಂದು ಪದೇ ಪದೇ ನಿರೂಪಿಸುವ ಮಹಾರಾಜನಾದ ತ್ರಿವಿಕ್ರಮನು, ಮತ್ತೆ ಹಿಂದಿರುಗಿ ಮರದ ಬಳಿಗೆ ಹೋಗಿ, ಕೊಂಬೆಯಲ್ಲಿ ನೇತಾಡುವ ಶವವನ್ನು ಕೆಳಗಿಳಿಸಿ ತನ್ನ ಹೆಗಲಿನ ಮೇಲೆ ಹಾಕಿಕೊಂಡು, ಎಂದಿನಂತೆ ಮೌನವಾಗಿ ಸ್ಮಶಾನದ ಕಡೆಗೆ ನಡೆಯತೊಡಗಿದನು. ಆಗ ಶವದೊಳಗಿರುವ ಬೇತಾಳವು ಮಾತಾಡಲು ತೊಡಗಿ, "ಎಲೈ ರಾಜನೇ, ನೀನು ಈ ವಿಧವಾಗಿ ಕಷ್ಟಪಡುತ್ತಿರುವುದು ಯಾವನಾದರೂ ಮಿತ್ರನಿಗೋಸ್ಕರವಾಗಿದ್ದರೆ, ಮಿತ್ರರ ಔದಾರ್ಯವು ನಂಬತಕ್ಕುದಲ್ಲವೆಂದು ತಿಳಿ. ಆದಕ್ಕೆ ನಿದರ್ಶನವಾಗಿ ನಿನಗೆ ಕುಮಾರವರ್ಮನ ದುಷ್ಪ್ರವರ್ತನೆಯನ್ನು ಕುರಿತು ಹೇಳುತ್ತೇನೆ. ದಾರಿಯ ಶ್ರಮ ತಿಳಿಯದಂತೆ ಕೇಳುತ್ತಾ ನಡೆ" ಎಂದು ಹೀಗೆ ಕಥೆಯನ್ನು ಹೇಳತೊಡಗಿತು :

ಕುಮಾರವರ್ಮನೆಂಬವನು ಕೌಶಾಂಬೀ ನಗರಕ್ಕೆ ಸೇರಿದ ಕ್ಷತ್ರಿಯ ಯುವಕ. ಅವನು ಅನೇಕ ದೇಶಗಳಲ್ಲಿ ಕೂಲಿಗೆ ಸೈನಿಕನಾಗಿ ಕೆಲಸಮಾಡಿ, ಹೇರಳವಾಗಿ ಧನ ಸಂಪಾದನೆ ಮಾಡಿದನು. ಸಾಕಾಗು

## ಬೇತಾಳಕಥೆಗಳು



ವಷ್ಟು ಧನವು ಸೇರಿದ ಮೇಲೆ ಅವನಿಗೆ ಸ್ವದೇಶಕ್ಕೆ ಹೋಗಬೇಕೆನಿಸಿತು.

ಕೌಶಾಂಬೀ ನಗರಕ್ಕೆ ಹೋಗಿ, ತನಗೆ ಯೋಗ್ಯಳಾಗಿ ತೋರಿದ ಹುಡುಗಿಯನ್ನು ಮದುವೆ ಮಾಡಿಕೊಂಡು ತಾನು ಸಂಪಾದಿಸಿದ ಹಣದಿಂದ ಸುಖವಾಗಿಯೂ ನೆಮ್ಮದಿಯಾಗಿಯೂ ಬದುಕಬಹುದೆಂದು ಅಂದುಕೊಂಡು ಕುಮಾರವರ್ಮನು ಕುದುರೆಯ ಮೇಲೆ ಹೊರಟನು.

ದಾರಿಯಲ್ಲಿ ಕುಮಾರವರ್ಮನಿಗೆ ಧನಗುಪ್ತನೆಂಬ ವರ್ತಕನು ತನ್ನ ಮಗನೊಂದಿಗೆ ಜತೆಗೂಡಿದನು. ಧನಗುಪ್ತನು ಸಹಾ ಕೌಶಾಂಬಿಗೆ ಹೋಗುವವನೇ. ಅವನ ಸ್ವಂತ ಊರೂ ಕೌಶಾಂಬಿಯೇ, ಅವನು ಸಾಧಾರಣ ವ್ಯಾಪಾರಿಯಾಗಿರದೆ ಕೋಟೀಶ್ವರನಾದ ವರ್ತಕನೆಂದೂ ತಿಳಿಯಿತು. ಧನಗುಪ್ತನೊಂದಿಗೆ ಅವನ ಕುಮಾರ ನಂದಗುಪ್ತನೂ ವ್ಯಾಪಾರಕ್ಕಾಗಿ ದೇಶಗಳಿಗೆ ಹೊರಡುವುದು ಇದುವೇ ಮೊದಲನೇ ಸಾರಿಯಾಗಿತ್ತು. ವ್ಯಾಪಾರದ ಹಿಡಿತಗಳನ್ನು ಕಲಿಯಬೇಕೆಂತಲೇ ಅವನೂ ತಂದೆಯೊಂದಿಗೆ ಹೊರಟಿದ್ದನು. ಧನಗುಪ್ತನು ಮಗನನ್ನು ತನ್ನೊಂದಿಗೆ ತುಂಬಾ ತಿರುಗಾಡಿಸಿ ದಣಿಸಿದ್ದನು. ಇನ್ನು ಮೇಲೆ ಹೆಚ್ಚು ದಣಿಸಬಾರದೆಂದೂ, ಮಗನನ್ನು ಸ್ವಂತ ಊರಾದ ಕೌಶಾಂಬಿಯಲ್ಲಿ ಬಿಟ್ಟು ತಾವು ಮಾತ್ರ ಇನ್ನೂ ಕೆಲವು ದೇಶಗಳಿಗೆ ಹೋಗಬೇಕೆಂದೂ ಆಲೋಚಿಸಿದ್ದನು. ಆಗಲೇ ಕುಮಾರವರ್ಮನು ದಾರಿಯಲ್ಲಿ ಸಿಕ್ಕಿದ್ದನು.

ಕುಮಾರವರ್ಮನು ನುರಿತ ಯುದ್ಧವೀರನೂ, ಕೌಶಾಂಬಿಗೇ ಹೋಗುವವನೂ ಆದುದರಿಂದ ಧನಗುಪ್ತನಿಗೆ ತನ್ನ ಮಗನ ಚಿಂತೆ ಬಗೆಹರಿದಂತಾಯಿತು. ಅವನು ತನ್ನ ಮಗನನ್ನು ಕುಮಾರವರ್ಮನ ವಶಕ್ಕೆ ಬಿಟ್ಟುಕೊಟ್ಟು, ತಾನು ವ್ಯಾಪಾರ ನಿಮಿತ್ತವಾಗಿ ಬೇರೆ ಕೆಲವು ದೇಶಗಳ ಕಡೆಗೆ ಹೋಗಿ ಬರುವೆನೆಂದು ಹೇಳಿ, ಮಗನ ಕೈಗೆ ಸಾಗುವಷ್ಟು ಧನವನ್ನೂ ಕೊಟ್ಟು, ತಾನು ಅಡ್ಡ ಬೀದಿ ಹಿಡಿದು ಹೊರಟು ಹೋದನು.

ಹೀಗೆ ನಂದಗುಪ್ತನೂ ಕುಮಾರವರ್ಮನೂ ದಾರಿಯ ಗೆಳೆಯರಾಗಿ ಕೌಶಾಂಬಿಗೆ ಮುಂದುವರಿದು ಸಾಗಿದರು. ನಡುದಾರಿಯಲ್ಲಿ ಅವರಿಗೊಂದು ಮಹಾ ನಗರವು ತಗಲಿತು.

ಆ ಪ್ರಾಂತದಲ್ಲಿ ವಜ್ರಗಳ ಗನಿಗಳಿದ್ದುದರಿಂದ ಅಲ್ಲಿ ವಜ್ರಗಳು ಕಡಿಮೆ ಬೆಲೆಗೆ ಸಿಗುವುವು. ಅಲ್ಲಿ ವಜ್ರಗಳನ್ನು ಕೊಂಡುಕೊಂಡರೆ ಕೌಶಾಂಬಿಯಲ್ಲಿ ಒಳ್ಳೆಯ ಬೆಲೆಗೆ ಮಾರಬಹುದು. ಈ ಆಲೋಚನೆಯಿಂದ ನಂದಗುಪ್ತನು ಕುಮಾರವರ್ಮನನ್ನು ಕರೆದುಕೊಂಡು ವಜ್ರಗಳ ವರ್ತಕರ ಬಳಿಗೆ ಹೋಗಿ ವಜ್ರಗಳನ್ನು ಕೊಂಡುಕೊಂಡನು.

ನಂದಗುಪ್ತನಿಗೆ ತಂದೆ ಕೊಟ್ಟಿರುವ ಧನಕ್ಕೆ ನಾಲ್ಕು ವಜ್ರಗಳನ್ನಷ್ಟೇ ಕೊಂಡುಕೊಳ್ಳಲು ಸಾಧ್ಯವಾಯಿತು.

"ಇಲ್ಲಿಯ ಸಂಗತಿ ಗೊತ್ತಿದ್ದರೆ, ತಂದೆಯನ್ನು ಕೇಳಿ ಇನ್ನೂ ಹೆಚ್ಚಿಗೆ ಹಣ ತೆಗೆದುಕೊಳ್ಳುತ್ತಿದ್ದೆ. ಇನ್ನೂ ಹೆಚ್ಚು ವಜ್ರಗಳನ್ನು ಕೊಂಡುಕೊಳ್ಳಲು ಸಾಧ್ಯವಿರುತ್ತಿದ್ದರೆ ಇನ್ನಷ್ಟು ಲಾಭಕರವಾದ ವ್ಯಾಪಾರ ಮಾಡಿಕೊಳ್ಳಬಹುದಿತ್ತು! ತಂದೆಗೆ ಈ ನಗರದ ಸಂಗತಿ ಗೊತ್ತಿರಲಿಲ್ಲವೋ, ನೆನಪಾಗಲಿಲ್ಲವೋ?" ಎಂದು ಹೇಳಿಕೊಂಡನು ನಂದಗುಪ್ತ.

"ನಿನಗೆ ಬೇಕಾದರೆ ನನ್ನ ಹತ್ತಿರ ಇರುವ ಧನವನ್ನು ಕೊಡುತ್ತೇನೆ. ದಾರಿಯಲ್ಲಿ ನನಗೇನೂ ಹಣದ ಖರ್ಚು ಇಲ್ಲ. ಆದರಿಂದ ಸಿಗುವಷ್ಟು ವಜ್ರಗಳನ್ನು ಕೊಂಡುಕೊಂಡು, ಕೌಶಾಂಬಿಗೆ ಹೋದ ಮೇಲೆ ಅವುಗಳನ್ನು ಮಾರಿ ನನ್ನ ಹಣ ನನಗೆ ಕೊಟ್ಟು ಬಿಡು." ಎಂದು ಕುಮಾರವರ್ಮನು ಉದಾರ ಬುದ್ಧಿಯಿಂದ ಹೇಳಿದನು.

ನಂದಗುಪ್ತನು ಅದಕ್ಕೆ ಒಪ್ಪಿ, ಕುಮಾರವರ್ಮನ ಧನವನ್ನು ಕೈಗಡವಾಗಿ ಪಡೆದು, ಮತ್ತೆ ನಾಲ್ಕು ವಜ್ರಗಳನ್ನು ಕೊಂಡುಕೊಂಡನು. ಆನಂತರ ಅವರು ಅಲ್ಲಿಂದ ಮುಂದಕ್ಕೆ ಪ್ರಯಾಣ ಹೊರಟರು.

ಕೌಶಾಂಬಿಗೆ ಇನ್ನು ಒಂದು ದಿನದ ದಾರಿ ಉಳಿದಿರುವಾಗ ಅವರು ಒಂದು ಅಡವಿದಾರಿಯೊಳಗೆ ಪ್ರವೇಶಿಸಿದರು. ಕತ್ತಲೆಯಾಗುವುದರೊಳಗೆ ಆ ಅಡವಿಯನ್ನು ದಾಟಿಬಿಡಬೇಕೆಂದು ಎಷ್ಟು ಬೇಗ ಕುದುರೆಗಳನ್ನು ನಡೆಸಿದರೂ, ಇನ್ನೂ ಅಷ್ಟು ದೂರ ಅಡವಿ ಇರುವಾಗಲೇ ಕತ್ತಲಾಗಿಬಿಟ್ಟಿತು. ಮುಂದೆ ನಡೆಯಲು ಸಾಧ್ಯವಾಗದೆ, ಆ ರಾತ್ರಿಯನ್ನು ಅಡವಿಯಲ್ಲೇ ಕಳೆಯಬೇಕಾಗಿ ಬಂತು.

ಇದರಿಂದ ನಂದಗುಪ್ತನಿಗೆ ಕೆಟ್ಟ ಭಯ ಹಿಡಿದುಕೊಂಡಿತು. ಏಕೆಂದರೆ ಆ ಅಡವಿ ಕಳ್ಳರಿಗೆ ಪ್ರಸಿದ್ಧಿ ಪಡೆದಿತ್ತು. ತನ್ನ ಹತ್ತಿರವಿರುವ ಎಂಟು ವಜ್ರಗಳನ್ನು ಕಳ್ಳರು ಸುಲಿದುಕೊಂಡರೆ ತನ್ನ ಹಣವೆಲ್ಲಾ ಹೋಗುವುದು ಮಾತ್ರವಲ್ಲದೆ, ತಾನು



ಕುಮಾರವರ್ಮನಿಗೆ ನಿಷ್ಕಾರಣವಾಗಿ ಬಾಕಿ ಕೊಡಬೇಕಾಗಿಬರುತ್ತದೆ.

ಕುಮಾರವರ್ಮನ ಹತ್ತಿರ ಕತ್ತಿಯಿದೆ ನಿಜ. ಆದರೆ ಅವನು ತನ್ನನ್ನು ಕಳ್ಳರಿಂದ ಕಾಪಾಡಲು ಅವನ ಪ್ರಾಣವನ್ನು ಅಲಕ್ಷಿಸುವನೆಂದು ಹೇಗೆ ನಂಬುವುದು? ಅವನ ಹಣದಿಂದ ತಾನು ವಜ್ರಗಳನ್ನು ಕೊಂಡುಕೊಂಡಿರುವುದರಿಂದ, ಅವನ ಹತ್ತಿರದಿಂದ ಕಳ್ಳರಿಗೆ ದೋಚಿಕೊಳ್ಳುವಂತಹುದು ಏನೂ ಇಲ್ಲದಂತಾಗಿದೆ. ಕುಮಾರವರ್ಮನಿಗೆ ತಾನು ಋಣಿಯಾಗದಂತೆ ಇರಲು ಬೇರೆ ದಾರಿಯಾವುದೋ ಅವನಿಗೆ ಗೊತ್ತಾಗಲಿಲ್ಲ. ಅವನ ಹಣದಿಂದ ಕೊಂಡುಕೊಂಡ ವಜ್ರಗಳನು ಅವನಿಗೇ ಕೊಟ್ಟುಬಿಟ್ಟರೆ, ಅವುಗಳ ರಕ್ಷಣೆಗಾಗಿಯಾದರೂ ಅವನು ಕಳ್ಳರೊಡನೆ ಹೋರಾಡಿಯಾನು. ಅದರಿಂದ ತನಗೂ ರಕ್ಷಣೆಯುಂಟಾಗುತ್ತದೆ.

ಹೀಗೆ ಅಂದುಕೊಂಡು ನಂದಗುಪ್ತನು ಕುಮಾರವರ್ಮನೊಂದಿಗೆ, "ಕುಮಾರವರ್ಮ! ನಿನ್ನ ಹಣ



ದಿಂದ ವಜ್ರಗಳನ್ನು ಕೊಂಡು ಕೊಂಡು ನಾನು ಲಾಭಗಳಿಸುವುದು ತುಂಬಾ ಅನ್ಯಾಯವೆಂದು ತೋರುತ್ತದೆ. ನನ್ನ ಅಂತರಾತ್ಮ ಅದಕ್ಕೆ ಒಪ್ಪುವುದಿಲ್ಲ. ನಿನ್ನ ವಜ್ರಗಳನ್ನು ನೀನೇ ತೆಗೆದುಕೊಂಡು ಕೌಶಾಂಬಿಯಲ್ಲಿ ಮಾರಿ, ಆ ಲಾಭವನ್ನು ಕೂಡಾ ನೀನೇ ಇಟ್ಟುಕೋ" ಎಂದು ಹೇಳಿ ನಾಲ್ಕು ವಜ್ರಗಳನ್ನು ತೆಗೆದು ಕುಮಾರವರ್ಮನಿಗೆ ಕೊಟ್ಟುಬಿಟ್ಟನು. ನಂದಗುಪ್ತನು ಈ ವೇಳೆಯಲ್ಲಿ ಯಾವ ಉದ್ದೇಶದಿಂದ ಹೀಗೆ ಮಾಡಿದನೆಂಬುದು ಕುಮಾರವರ್ಮನಿಗೆ ಕೂಡಲೇ ಅರ್ಥವಾಯಿತು.

ಅವನು ನಂದಗುಪ್ತನೊಂದಿಗೆ, "ಈಗ ಈ ಸ್ಥಳದಲ್ಲಿ ಈ ವೇಳೆಯಲ್ಲಿ ನನ್ನಹತ್ತಿರ ಬೆಲೆ ಬಾಳುವಂಥ ವಜ್ರಗಳಿರುವುದರಿಂದ ನನಗೆ ಕಳ್ಳರ ಭಯ ಉಂಟಾದ ಹಾಗೆಯೇ ಲೆಕ್ಕ. ಪರವಾಗಿಲ್ಲ, ನನ್ನನ್ನು ನಾನು ಕಾಪಾಡಿಕೊಂಡೇನೆಂಬ ನಂಬುಗೆ ನನಗಿದೆ. ಆದರಂತೆ ನಿನ್ನನ್ನು ಕೂಡಾ ನೀನೇ ಕಾಪಾಡಿಕೋ. ನಾನು ನಿನ್ನನ್ನೂ ರಕ್ಷಿಸಬಲ್ಲೆನೆಂದು ಮಾತು ಕೊಡಲು ಸಾಧ್ಯವಿಲ್ಲ. ನಿನ್ನ ವಿಷಯ ನೀನೇ ನೋಡಿಕೋ" ಎಂದು ಹೇಳಿ ತನ್ನ ಕುದುರೆಯನ್ನೇರಿ ಹೊರಟು ಹೋಗಲು ತಯಾರಾದನು.

ನಂದಗುಪ್ತನು ತುಂಬ ಹೆದರಿ ತನ್ನನ್ನು ಬಿಟ್ಟು ಹೋಗಬೇಡವೆಂದು ಕುಮಾರವರ್ಮನನ್ನು ಅಂಗಲಾಚಿ ಬೇಡಿಕೊಂಡನು. ಆಗ ಕುಮಾರವರ್ಮನು, "ಹಾಗಾದರೆ ಒಂದು ಷರತ್ತಿನ ಮೇಲೆ ನಿನ್ನನ್ನು ಕೌಶಾಂಬಿಗೆ ಕ್ಷೇಮವಾಗಿ ತಲಪಿಸುವ ಭಾರ ವಹಿಸಿಕೊಳ್ಳುತ್ತೇನೆ. ಅದಕ್ಕೆ ಪ್ರತಿಫಲವಾಗಿ ನಿನ್ನ ವಜ್ರಗಳಲ್ಲಿ ಎರಡನ್ನು ನನಗೆ ಕೊಡಬೇಕು. ಏನನ್ನುವಿ?" ಎಂದನು ಕುಮಾರವರ್ಮ.

ನಂದಗುಪ್ತನು ಅದಕ್ಕೆ ಒಪ್ಪಿಕೊಂಡನು. ಆ ದಿನ ರಾತ್ರಿ ಯಾವ ಗಂಡಾಂತರವೂ ಬಾರದೆ ಕ್ಷೇಮವಾಗಿಯೇ ಕಳೆಯಿತು. ಮಾರನೆ ದಿನ ಬೆಳಗಾದ ಕೂಡಲೇ ಅವರು ಆ ಕಾಡಿನಿಂದ ಹೊರಟು, ಆ ದಿನ ಕತ್ತಲಾಗುವುದರೊಳಗೆ ಕೌಶಾಂಬೀ ನಗರವನ್ನು ತಲಪಿದರು.

ನಂದಗುಪ್ತನು ತಾನು ಒಪ್ಪಿಕೊಂಡಂತೆ ತನ್ನ ನಾಲ್ಕು ವಜ್ರಗಳಲ್ಲಿ ಎರಡು ವಜ್ರಗಳನ್ನು ಕುಮಾರವರ್ಮನಿಗೆ ಕೊಟ್ಟುಬಿಟ್ಟನು.

ಬೇತಾಳವು ಹೀಗೆ ಕಥೆಯನ್ನು ಮುಗಿಸಿ, "ರಾಜನೇ, ಕುಮಾರವರ್ಮನ ಪ್ರವರ್ತನೆಗೆ ಏನು ಹೇಳಬೇಕು? ನಂದಗುಪ್ತನು ಸ್ವಾರ್ಥಪರನಾದವನೇ ಇರಬಹುದು. ಆದರೆ ಅದು ಸಾಧಾರಣವಾಗಿ ವರ್ತಕ ವೃತ್ತಿಯವರಿಗೆಲ್ಲ ಇರುವಂತಹ ಸ್ವಾರ್ಥವೇ. ಅವನು ಕುಮಾರವರ್ಮನಿಗೆ ಬೇರೆ ಯಾವ ಬಗೆಯ ದ್ರೋಹವನ್ನೂ ಮಾಡಲಿಲ್ಲ. ಅವನ ಹಣದಿಂದ ತೆಗೆದುಕೊಂಡ ವಜ್ರಗಳನ್ನು ಅವನಿಗೇ ಹಿಂದಿರುಗಿ ಕೊಟ್ಟು ಅವುಗಳ ಜವಾಬ್ದಾರಿ, ತನಗಿಲ್ಲದಂತೆ ಮಾಡಿಕೊಂಡನು ಅಷ್ಟೇ. ಕುಮಾರವರ್ಮನ ಹತ್ತಿರ ಧನವೇ ಇರುತ್ತಿದ್ದರೆ

ಅವನಿಗೆ ಎಷ್ಟರಮಟ್ಟಿಗೆ ಕಳ್ಳರ ಭಯವಿರುತ್ತಿತ್ತೋ ವಜ್ರಗಳಿದ್ದುದರಿಂದಲೂ ಅಷ್ಟೇ ಇತ್ತೆನ್ನಬಹುದು. ಆದುದರಿಂದ ನಂದಗುಪ್ತನ ಪ್ರವರ್ತನೆಯಲ್ಲಿ ತಪ್ಪು ಹಿಡಿಯಲು ಸಾಧ್ಯವಿಲ್ಲ. ಕುಮಾರವರ್ಮನ ಪ್ರವರ್ತನೆ ಹಾಗಿಲ್ಲವಲ್ಲ? ನಂದಗುಪ್ತನನ್ನು ರಕ್ಷಿಸುವ ಭರವಸೆಗಾಗಿ ಅವನ ವಜ್ರಗಳಲ್ಲಿ ಎರಡನ್ನು ಕೇಳಿದನಲ್ಲ? ಇದು ಅಧರ್ಮವಲ್ಲವೇ? ಅವನ ಭಯವನ್ನು ತನ್ನ ಲಾಭಕ್ಕೆ ಉಪಯೋಗಿಸಿಕೊಂಡವನಾಗಲಿಲ್ಲವೇ? ವಜ್ರಗಳನ್ನು ಕೊಂಡುಕೊಳ್ಳಲಿಕ್ಕಾಗಿ ನಂದಗುಪ್ತನಿಗೆ ಕುಮಾರವರ್ಮನು ತನ್ನ ಹಣವನ್ನು ಕೊಟ್ಟು ತೋರಿಸಿದ ಔದಾರ್ಯವು ಕಪಟವಾಯಿತೋ ಇಲ್ಲವೋ? ಈ ಸಂದೇಹಕ್ಕೆ ತಕ್ಕ ಸಮಾಧಾನ ತಿಳಿದೂ ಹೇಳದಿದ್ದರೆ ನಿನ್ನ ತಲೆ ಒಡೆಯುವುದು ಖಂಡಿತ" ಎಂದು ಸುಮ್ಮನಾಯಿತು.

ಆದಕ್ಕೆ ತ್ರಿವಿಕ್ರಮನು ಹೀಗೆಂದನು: "ಇದರಲ್ಲಿ ನಂದಗುಪ್ತನನ್ನಾಗಲಿ, ಕುಮಾರವರ್ಮನನ್ನಾಗಲಿ ಮೆಚ್ಚುವಂಥಾದ್ದೋ, ತಪ್ಪು ಹಿಡಿಯುವಂಥಾದ್ದೋ ಏನೂ ಇಲ್ಲ. ಅವರವರ ವೃತ್ತಿ ಧರ್ಮವನ್ನೇ ಅವರವರು ಅನುಸರಿಸಿದ್ದಾರೆ. ಕುಮಾರವರ್ಮನು ತನ್ನ ಹಣವನ್ನು ನಂದಗುಪ್ತನಿಗೆ ಕೊಡುವುದರಲ್ಲಿ ಔದಾರ್ಯವೇನಿರಲಿಲ್ಲ. ಕಡಿಮೆ ಬೆಲೆಯಲ್ಲಿ ಕೊಂಡುಕೊಂಡು ಹೆಚ್ಚಿನ ಬೆಲೆಗೆ ಮಾರುವುದು ಕುಮಾರವರ್ಮನ ವೃತ್ತಿಯಲ್ಲ. ಕೌಶಾಂಬಿ ಸೇರುವವರೆಗೆ ತನಗೆ ತನ್ನ ಹಣದಲ್ಲಿ ಕೆಲಸವಿಲ್ಲವೆಂದು ಅವನು ಮೊದಲೇ ಹೇಳಿದ್ದಾನೆ. ಕುಮಾರವರ್ಮನಿಂದ ಹಣವನ್ನು ಪಡೆದ ನಂದಗುಪ್ತನು ಅವನಿಗೆ ವಜ್ರಗಳ ರೂಪದಲ್ಲೇ ತಿರುಗಿಕೊಟ್ಟು ಲಾಭಮಾಡಿಕೊಳ್ಳುವುದು ಸರಿಯಾದುದಲ್ಲ. ಅವನು ಅಂತಹ ಕೆಲಸಮಾಡಲು ಎಳಸಿದ್ದರೆ ನಂದಗುಪ್ತನೊಂದಿಗೆ ತಾನೇ. ನಾಲ್ಕು ವಜ್ರಗಳನ್ನು ಕೊಂಡುಕೊಳ್ಳುತ್ತಿದ್ದನು. ನಂದಗುಪ್ತನ ಪ್ರವರ್ತನೆ ಕುಮಾರಗುಪ್ತನಿಗೆ ಸಿಟ್ಟುಬರಿಸುವಂತೆಯೇ ಇತ್ತು. ಅವನು ನಂದಗುಪ್ತನನ್ನು ಕ್ಷೇಮವಾಗಿ ಮನೆಗೆ ಸೇರಿಸಲಿಕ್ಕಾಗಿ ಪ್ರತಿಫಲ ಕೇಳಿದರೆ ಅದು ಅವನ ವೃತ್ತಿ ಧರ್ಮವೇ ಆಯಿತು. ಅವನು ಸಂಪಾದಿಸಿದ ಹಣವೆಲ್ಲಾ ಹಾಗೆಯೇ ಸಂಪಾದಿಸಿದ್ದನು. ಕುಮಾರವರ್ಮನು ತನ್ನನ್ನು ರಕ್ಷಿಸಬಲ್ಲವನಾಗಿದ್ದು ಕೂಡಾ. ನಂದಗುಪ್ತನು ತನ್ನ ಸಂಕುಚಿತ ಬುದ್ಧಿಯನ್ನು ಹೊರಪಡಿಸಿದನು. ಅವನ ವೃತ್ತಿಯಿಂದ ಅಂತಹ ಸಂಕುಚಿತಬುದ್ಧಿ ಏರ್ಪಟ್ಟಿದೆ. ಸ್ವಾರ್ಥವೆಂಬುದು ಇಲ್ಲದೆ ಯಾರೂ ಇನ್ನೊಬ್ಬರಿಗೆ ಸಹಾಯ ಮಾಡಲಾರರೆಂಬುದು ಆ ವರ್ತಕ ಪುತ್ರನ ದೃಷ್ಟಿಯಾಗಿತ್ತು."

ಹೀಗೆ ರಾಜನಿಗೆ ಮೌನ ಭಂಗವಾದಕೂಡಲೇ ಬೇತಾಳವು ಶವದೊಂದಿಗೆ ಮಾಯವಾಗಿ ಹೋಗಿ ಮರದ ಕೊಂಬೆಯನ್ನು ಸೇರಿತು.





# ಸನ್ಮಾನ

ಅನೇಕ ವರ್ಷಗಳ ಹಿಂದೆ ಪಾಂಚಾಲ ದೇಶಕ್ಕೆ ಒಂದೇ ಬಾರಿಯಾಗಿ ಎರಡು ಗಂಡಾಂತರಗಳು ಬಂದು ಬಿದ್ದುವು. ಮೊದಲು ನೆರೆದೇಶದ ರಾಜನೊಂದಿಗೆ ಯುದ್ಧವು ಸಂಘಟಿಸಿತು. ಆದರಲ್ಲಿ ಜಯಾಪಜಯಗಳು ಯಾರಿಗೂ ಆಗದೆ, ಸಂಧಿಯು ಒಪ್ಪಂದದಲ್ಲಿ ಕೊನೆಗಂಡಿತು. ಆದರೆ ಅಷ್ಟು ಹೊತ್ತಿಗೆ ಪಾಂಚಾಲದ ಖಜಾನೆ ಬಹಳ ಮಟ್ಟಿಗೆ ಖಾಲಿಯಾಗಿ ಹೋಗಿತ್ತು. ಅದು ಸಾಲದೆನ್ನುವಂತೆ ಆ ವರ್ಷ ಮಳೆಯೇ ಬಾರದೆ ಕೆಟ್ಟ ಬರಗಾಲವೂ ಬಂತು.

ಇದನ್ನೆಲ್ಲ ನೋಡಿ ಪಾಂಚಾಲದ ರಾಜನಾದ ಸುಧೀರನಿಗೆ ಏನು ಮಾಡಬೇಕೆಂದು ಗೊತ್ತಾಗಲಿಲ್ಲ. ಕ್ಷಾಮ ನಿವಾರಣೆಗಾಗಿ ಹೋಮ ಮಾಡಬೇಕೆಂದೂ, ಗೃಹಶಾಂತಿ ಮಾಡಬೇಕೆಂದೂ ಕೆಲವರು ಆಲೋಚನೆ ಹೇಳಿದರು. ಅವುಗಳಿಗೆ ಖರ್ಚು ಮಾಡುವಷ್ಟು ಹಣವು ಖಜಾನೆಯಲ್ಲಿಲ್ಲದುದರಿಂದ ಅದು ಅಸಾಧ್ಯವಾಗಿ ತೋರಿತು. ಹೀಗೆ ಯೋಚನೆ ನಡೆಯುವಾಗ ಒಬ್ಬ ಸಭಿಕನು ತನ್ನದೊಂದು ಯೋಚನೆ ತಿಳಿಸಿದನು. ಆ ದೇಶದಲ್ಲಿ ಒಬ್ಬ ವೈಣಿಕನಿರುವನಂತೆ. ಅವನ ಹೆಸರು ದೀಪಕನಂತೆ. ಅವನಿಗೆ ಆ ಹೆಸರು ಬರಲು ಕಾರಣವೇನೆಂದರೆ, ಅವನು ವೀಣೆಯಲ್ಲಿ ದೀಪಕರಾಗವನ್ನು ಬಾರಿಸಿದರೆ ದೀಪಗಳೆಲ್ಲ ತನ್ನಂತಾನೇ ಹತ್ತಿಕೊಂಡು ಉರಿಯುತ್ತವಂತೆ. ಅಂತಹ ರಾಗಶಕ್ತಿಯುಳ್ಳ ವಿದ್ವಾಂಸನು ಮೇಘಮಲ್ಲಾರ ರಾಗವನ್ನು ಬಾರಿಸಿದನಾದರೆ ಮಳೆಯೂ ಬಂದೀತು.

ಈ ಸಮಾಚಾರ ಕೇಳಿ ರಾಜನು ಆಶ್ಚರ್ಯಪಟ್ಟು, ಅಂತಹ ಶಕ್ತಿ ಸಾಮರ್ಥ್ಯಗಳನ್ನು ತಪ್ಪದೆ ನೋಡಲೇ ಬೇಕೆಂದು ನಿಶ್ಚಯಿಸಿದನು. ರಾಜನೂ ಮಂತ್ರಿಯೂ ವೇಷ ಬದಲಾವಣೆ ಮಾಡಿಕೊಂಡು ಆ ದಿನ ರಾತ್ರಿಯೇ ದೀಪಕನಿರುವ ಗ್ರಾಮಕ್ಕೆ ಹೊರಟು, ಮರುದಿನ ಬೆಳಗ್ಗೆ ದೀಪಕನ ಮನೆಯನ್ನು ತಲಪಿದರು. ಅವರು ಹೋದಾಗ ದೀಪಕನು ತನ್ನ ಮನೆಯಲ್ಲಿ ಸರಸ್ವತೀ ದೇವಿಯ ಇದಿರಿನಲ್ಲಿ ಕುಳಿತುಕೊಂಡು ವೀಣೆಯ ಮೇಲೆ ದೀಪಕ ರಾಗವನ್ನು ಬಾರಿಸಲು ಪ್ರಾರಂಭಿಸಿದ್ದನು. ಸ್ವಲ್ಪ ಹೊತ್ತಿಗೆ ಸರಸ್ವತೀದೇವಿಯ ವಿಗ್ರಹದ ಮುಂದೆ ದೀಪಗಳು ಜಗ್ಗನೆ ಬೆಳಗಿದವು.

ತರುವಾಯ ದೀಪಕನು ಸರಸ್ವತೀದೇವಿಯನ್ನು ಪೂಜಿಸಲು ತೊಡಗಿದನು. ಈ ಅದ್ಭುತವನ್ನು ಕಣ್ಣಾರೆ ನೋಡಿದ ರಾಜನೂ ಮಂತ್ರಿಯೂ

ಎಂ. ಜಿ. ಶರ್ಮ

ಆಶ್ಚರ್ಯದಿಂದ ಸ್ತಂಭೀಭೂತರಾದರು. ದೀಪಕನು ಪೂಜೆಯನ್ನು ಪೂರ್ತಿಗೊಳಿಸಿದ ಮೇಲೆ ಈಚೆಗೆ ಲಕ್ಷ್ಯಹರಿಸಿ ಯಾರೋ ಇಬ್ಬರು ಬಂದಿರುವುದನ್ನು ನೋಡಿ, "ಓಹೋ! ಮಹಾರಾಜರೇ! ನನ್ನಿಂದ ತಮಗೇನಾಗಬೇಕೋ?" ಎಂದನು.

ರಾಜನು ಇನ್ನಷ್ಟು ಆಶ್ಚರ್ಯದಿಂದ, "ನನ್ನನ್ನು ಹೇಗೆ ಗುರುತಿಸಿದೆ?" ಎಂದು ಕೇಳಿದನು. "ಈ ಮೊದಲು ತಮ್ಮನ್ನು ನೋಡಿದ್ದೇನೆ. ತಾವು ಸುದ್ದಿ ಕಳುಹಿಸಿದ್ದರೆ ನಾನೇ ಬರುತ್ತಿದ್ದೆ" ಎಂದನು ದೀಪಕ.

"ಆದರಲಿ, ದೀಪಕಾ, ನಿನ್ನ ಈ ಪ್ರತಿಭೆಯನ್ನು ದೇಶದ ಕ್ಷೇಮಕ್ಕಾಗಿ ಉಪಯೋಗಪಡಿಸಬಾರದೇ?" ಎಂದು ಕೇಳಿದನು ರಾಜ, "ಹೇಗೆ ಉಪಯೋಗಿಸ ಬೇಕೆನ್ನುವಿರಿ?" ಎಂದು ದೀಪಕನು ಕೇಳಿದನು.

"ದೀಪಕರಾಗದಿಂದ ದೀಪಗಳನ್ನು ಬೆಳಗಿಸಿದ ನೀನು ಮೇಘಮಲ್ಲಾರ ರಾಗವನ್ನು ಬಾರಿಸಿ ಮಳೆಬರುವ ಹಾಗೆ ಮಾಡಲಾರೆಯಾ? ದೇಶದಲ್ಲಿ ನೀರಿನಬರಗಾಲ ಉಂಟಾಗಿದೆಯಲ್ಲಾ?" ಎಂದನು ರಾಜ.

ದೀಪಕನು ಆಶ್ಚರ್ಯಪಡುತ್ತ, "ಅಂತಹ ಕೆಲಸ ನನ್ನಿಂದ ಸಾಧ್ಯವಾದೀತೇ? ನಾನು ಮೇಘಮಲ್ಲಾರ ರಾಗದಿಂದ ಮಳೆಬರಿಸಲು ಈ ವರೆಗೂ ಪ್ರಯತ್ನ ಮಾಡಿದವನಲ್ಲ" ಎಂದನು. "ಈಗ ಪ್ರಯತ್ನಿಸಿ ನೋಡಬಹುದಷ್ಟೇ?" ಎಂದು ರಾಜನು ಹೇಳಲು, ದೀಪಕನು, "ನೋಡುತ್ತೇನೆ. ಒಂದು ವಾರದಿನ ಗಳಷ್ಟು ಅವಕಾಶ ಕೊಡಿರಿ" ಎಂದನು.

ರಾಜನೂ ಮಂತ್ರಿಯೂ ಅಲ್ಲಿಂದ ಹಿಂದಿರುಗಿ ದರು. ತರುವಾಯ ದೀಪಕನು ಒಂದು ವಾರದ ವರೆಗೆ ಸರಸ್ವತೀದೇವಿಯನ್ನು ಆರಾಧಿಸಿ, ಕಡೆಯ ದಿನ ಸಮೀಪದಲ್ಲಿದ್ದ ಪರ್ವತದ ಮೇಲೆ ವೀಣೆ ಯೊಂದಿಗೆ ಹೊರಟನು.

ಅವನ ಹಿಂದೆ ಅನೇಕ ಜನರೂ ಹೊರಟಿದ್ದರು. ದೀಪಕನು ಪರ್ವತ ಶಿಖರದ ಮೇಲೆ ಕುಳಿತು



ಕೊಂಡು ವೀಣೆಯ ಮೇಲೆ ಮೇಘಮಲ್ಲಾರ ರಾಗ ವನ್ನು ಬಾರಿಸ ತೊಡಗಿದನು. ಸ್ವಲ್ಪ ಹೊತ್ತಿನಲ್ಲಿ ಎಲ್ಲಾ ದಿಕ್ಕುಗಳಿಂದಲೂ ಮೇಘಗಳು ಬಂದು ಆಕಾಶ ದಲ್ಲಿ ಹರಡತೊಡಗಿದವು. ಗಾಳಿಯೂ ಮಿಂಚು ಗುಡುಗುಗಳೂ ತೊಡಗಿ ಮಳೆಯೂ ಪ್ರಾರಂಭ ವಾಯಿತು. ಮಳೆ ಕುಂಭವೃಷ್ಟಿಯಾಗಿ ಸುರಿಯಿತು. ಒಣಗಿ ಹೋದ ಬಾವಿಗಳೂ ಕೆರೆಗಳೂ ನೀರಿನಿಂದ ತುಂಬಿದುವು. ಜನರಿಗೆ ಆನಂದವೋ ಆನಂದ.

ರಾಜನು ದೀಪಕನನ್ನು ತನ್ನ ಸಭೆಗೆ ಕರೆಯಿಸಿ ಅವನಿಗೆ ದೊಡ್ಡ ರೀತಿಯಲ್ಲಿ ಸನ್ಮಾನ ಮಾಡಬೇಕೆಂದು ಬೇಕಾದುದನ್ನೆಲ್ಲಾ ತರಲು ಹೇಳಿದನು. ಆದರೆ ದೀಪಕನು ಸನ್ಮಾನ ಪಡೆಯಲು ನಿರಾಕರಿಸಿ, ರಾಜನಿಂದ ಅಪ್ಪಣೆಪಡೆದು ತನ ಮನೆಗೆ ಹಿಂದಿರುಗಿ ಬಿಟ್ಟನು.

ಮುಂದೆ ಒಂದು ದಿನ ಸುಧೀರರಾಜನ ಆಸ್ಥಾನಕ್ಕೆ ದೂರದೇಶದಿಂದ ಒಬ್ಬ ವೈಣಿಕ ವಿದ್ವಾಂಸನು ಬಂದು, "ಮಹಾರಾಜರೆ, ನನ್ನ ಹೆಸರು ವೈನಾಕ. ನಿಮ್ಮ

ದೇಶದಲ್ಲಿ ದೀಪಕನೆಂಬ ದೊಡ್ಡ ವೈಣಿಕ ನಿರುವನೆಂದೂ, ಆತನು ತನ್ನ ವೀಣೆಯನ್ನು ಸಂಗೀತಕ್ಕೆ ಮಾತ್ರವಲ್ಲದೆ, ಗಾರುಡೀ ವಿದ್ಯೆಗೆಕೂಡಾ ಉಪಯೋಗಿಸುವನೆಂದೂ ಕೇಳಿದೆನು. ನನಗೆ ಗಾರುಡೀ ಮುಂತಾದ ಹಸ್ತಲಾಘವಗಳಲ್ಲಿ ವಿಶ್ವಾಸವಿಲ್ಲ. ಮೂಢರಾದ ಪ್ರಜೆಗಳು ರವೆಯಷ್ಟಿರುವುದನ್ನು ಗುಡ್ಡದಷ್ಟು ಮಾಡಿ ಹೇಳುತ್ತಾರೆ. ದೀಪಕನೊಂದಿಗೆ ನಾನು ಸಂಗೀತದಲ್ಲಿ ಸ್ಪರ್ಧಿಸಬೇಕೆಂದಿದ್ದೇನೆ. ಈ ಅವಕಾಶ ಏರ್ಪಡಿಸಿಕೊಡಬೇಕು " ಎಂದು ಕೇಳಿದನು.

ರಾಜನು ದೀಪಕನಿಗೆ ಸಮಾಚಾರ ಕಳುಹಿಸಿದನು. ವೈನಾಕನೊಂದಿಗೆ ಸ್ಪರ್ಧಿಸಲು ಒಪ್ಪಿಕೊಂಡು ದೀಪಕನು ಹೊರಟುಬಂದನು. ತುಂಬಿದ ಸಭೆಯಲ್ಲಿ ಇಬ್ಬರ ಸ್ಪರ್ಧೆ ಪ್ರಾರಂಭವಾಯಿತು. ಮೊದಲು ವೈನಾಕನು ತನ್ನ ವೀಣೆಯನ್ನು ಬಾರಿಸಿ ತನ್ನ ಪೂರ್ತಿ ಪ್ರತಿಭೆಯನ್ನು ತೋರಿದನು. ತರುವಾಯ ಅದೇ ರಾಗವನ್ನು ದೀಪಕನು ತನ್ನ ವೀಣೆಯಲ್ಲಿ ಬಾರಿಸಿದನು. ಅದನ್ನು ಕೇಳುತ್ತ ವೈನಾಕನು ಕೈ ಜೋಡಿಸಿಕೊಂಡು ಎದ್ದುಬಂದು ದೀಪಕನ ಕಾಲಿಗೆ ಬಿದ್ದು, "ನೀನು ಸರಸ್ವತೀ ಪುತ್ರನೇ ನಿಜ ! ನಿನ್ನನ್ನು ಗಾರುಡಿಯುವನೆಂದುಕೊಂಡು ಅಪಚಾರವಮಾಡಿದೆನು. ಕ್ಷಮಿಸು !" ಎಂದು ಪ್ರಾರ್ಥಿಸಿಕೊಂಡನು. ಇದನ್ನು ನೋಡಿ ದೀಪಕನಿಗೆ ಸನ್ಮಾನ ಮಾಡಲು ಇದುವೇ ತಕ್ಕ ಸಂದರ್ಭವೆಂದು ಸಭಿಕರು ರಾಜನನ್ನು ಕೇಳಿಕೊಂಡರು. ದೀಪಕನು ಸನ್ಮಾನ ಸ್ವೀಕರಿಸಲು ಒಪ್ಪಿಕೊಳ್ಳಲಾರನೆಂದು ರಾಜನು ಸಂದೇಹಪಟ್ಟನು. ಕಡೆಗೆ ದೀಪಕನನ್ನೇ ಕೇಳಿದಾಗ, ತನ್ನ ಸನ್ಮಾನಕ್ಕೆ ಒಪ್ಪಿಗೆ ಇತ್ತನು.

"ದೇಶವನ್ನು ಬರಗಾಲದಿಂದ ಕಾಪಾಡಿದಾಗ ಕೂಡಾ ಸನ್ಮಾನ ಮಾಡಿಸಿಕೊಳ್ಳಲು ಒಪ್ಪದಿದ್ದವನು ಈಗ ಹೇಗೆ ಒಪ್ಪುವೆ ?" ಎಂದು ರಾಜನು ಆಶ್ಚರ್ಯದಿಂದ ಅವನನ್ನು ಕೇಳಿದನು.

"ಮಹಾಪ್ರಭುಗಳೇ, ನಾನು ಸ್ವಂತ ಶಕ್ತಿಯಿಂದ ಮಳೆ ಬರಿಸಿದೆನೆಂದು ಎಷ್ಟು ಮಾತ್ರಕ್ಕೂ ಭಾವಿಸಲಿಲ್ಲ. ನಾನು ಮೇಘಮಲ್ಲಾರವನ್ನು ಬಾರಿಸುವುದೂ, ಆಗ ಮಳೆ ಬರುವುದೂ ಕಾಕತಾಳೀಯ ನ್ಯಾಯವೋ; ನಿಮ್ಮ ಹಾಗೂ ಪ್ರಜೆಗಳ ನಂಬುಗೆಯ ಮಹತ್ವವೋ ಆಗಿದ್ದೀತು. ಹಾಗಿಲ್ಲದೆ, ಅದರಲ್ಲಿ ಯಾರದಾದರೂ ಶಕ್ತಿಯೇ ಇದ್ದರೆ ಅದು ಸರಸ್ವತೀದೇವಿಯದೇ ಇದ್ದೀತು. ಆಕೆಯ ಅನುಗ್ರಹ ನನ್ನ ಮೇಲಿರುವುದೇ ದೊಡ್ಡ ಸನ್ಮಾನ. ಅದಕ್ಕಾಗಿ ಬೇರೆ ಸನ್ಮಾನವನ್ನು ನಾನು ಏನೆಂದು ಸ್ವೀಕರಿಸಲಿ ? ಈಗ ನಾನು ಕೇವಲ ವೀಣೆಯ ವಿದ್ವಾಂಸನಾಗಿ, ಜತೆ ವಿದ್ವಾಂಸನೊಂದಿಗೆ ಸ್ಪರ್ಧಿಸಿದ್ದೇನೆ. ವಿಜಯವೂ ನನ್ನದೇ ಅಯಿತು. ಧಾರಾಳವಾಗಿ ಸನ್ಮಾನ ಮಾಡಿಸಿಕೊಳ್ಳಬಹುದಲ್ಲ !" ಎಂದನು ದೀಪಕ.





# ಭಕ್ಷ್ಯಬದಲಾಯಿಸುವಿಕೆ

**ಸಾ**ವಿರಾರು ವರ್ಷಗಳ ಹಿಂದೆ ಒಂದು ಮಹಾ ಕಾನನವಿತ್ತು. ಅದರೊಳಗೆ ಕಾಲಾಸುರನೆಂಬ ರಾಕ್ಷಸ ನೊಬ್ಬ ವಾಸವಾಗಿದ್ದನು. ಅವನು ನರಭಕ್ಷಕ ರಾಕ್ಷಸ ನಾದುದರಿಂದ ಆಗಾಗ ಕಾನನದೊಳಗಿಂದ ಹೊರ ಬಿದ್ದು ಸಿಕ್ಕಿದ ದನಗಾಹಿಗಳನ್ನು ಹಿಡಿದು ತಿನ್ನುತ್ತಿದ್ದನು. ಅಂತಹವನಿಗೆ ಒಂದು ಸಾರಿ ಒಬ್ಬ ಮುನೀಶ್ವರನು ಸಿಕ್ಕಿಬಿಟ್ಟನು.

ಮುನೀಶ್ವರನು ಆ ರಾಕ್ಷಸನೊಂದಿಗೆ, "ಎಲವೋ, ನನ್ನಂಥ ಒಣಕಲನನ್ನು ತಿನ್ನುವುದರಿಂದ ನಿನ್ನ ಹಸಿವೆ ತೀರುವ ಹಾಗಿಲ್ಲ. ನನ್ನ ತಪಸ್ಸಿನ ಶಕ್ತಿಯಿಂದ ನಿನ್ನನ್ನು ಕೊಂದುಬಿಡಬಲ್ಲೆನಾದರೂ, ಅದರಿಂದ ನಾನು ಮತ್ತೆ ನೂರು ವರ್ಷ ತಪಸ್ಸು ಮಾಡಿ ಹೋದ ನಷ್ಟ ತುಂಬಿಕೊಳ್ಳಬೇಕಾಗುತ್ತದೆ. ನೀನಂತೂ ಕಳೆದ ಜನ್ಮದಲ್ಲಿ ಘೋರ ಪಾಪಗಳನ್ನು ಮಾಡಿದುದ ರಿಂದ ಇಂಥ ರಾಕ್ಷಸ ಜನ್ಮ ಎತ್ತಿರುವೆ. ನನ್ನನ್ನು ನೀನು ಬಿಟ್ಟುಬಿಟ್ಟರೆ ಅದೊಂದು ದೊಡ್ಡ ಪುಣ್ಯ ವಾಗಿ ನಿನ್ನ ಲೆಕ್ಕಕ್ಕೆ ಸೇರುತ್ತದೆ. ಇನ್ನು ನಿನ್ನಿಷ್ಟ. ಯೋಚನೆ ಮಾಡು." ಎಂದನು. "ಹಾಗೋ?" ಎಂದು ಕಾಲಾಸುರನು ಸ್ವಲ್ಪ ಹೊತ್ತು ಆಲೋಚಿಸಿ ದನು. ತನ್ನ ಜನ್ಮವು ಕೆಟ್ಟುದೆಂದು ಅವನ ಮನಸ್ಸಿ ನಲ್ಲಿತ್ತು. "ನನ್ನ ರಾಕ್ಷಸ ಜನ್ಮ ಹೋಗಬೇಕಾದರೆ ಏನು ಮಾಡಬೇಕೆಂದು ಹೇಳುವಿರಿ?" ಎಂದು ಮುನಿಯನ್ನು ಕೇಳಿದನು.

ಮುನೀಶ್ವರನು ತನ್ನೊಳಗೆ, "ಇವನು ರಾಕ್ಷಸ ಜನ್ಮದವನಾದುದರಿಂದ ನರ ಭಕ್ಷಣ ಮಾಡುವುದನ್ನು ಬಿಡಬೇಕೆಂದರೆ ಬಿಡಲಾರನು. ಆದರೆ ಈ ಕಲಿಯುಗ ದಲ್ಲಿ ನಿಜವಾದ ಪುಣ್ಯಾತ್ಮರು ಅನೇಕವಾಗಿ ಇಲ್ಲ ವೆಂದೇ ಹೇಳಬಹುದು. ಆದುದರಿಂದ ಪುಣ್ಯಾತ್ಮ ರನ್ನು ಮಾತ್ರ ತಿನ್ನ ಬೇಕೆಂದರೆ ಇವನು ನರ ಭಕ್ಷಣ ವನ್ನು ಬಿಡಲೇ ಬೇಕಾಗುತ್ತದೆ" ಎಂದುಕೊಂಡು ರಾಕ್ಷಸನೊಂದಿಗೆ, "ನೀನು ಮನುಷ್ಯರನ್ನು ತಿನ್ನುವುದ ರಲ್ಲಿ ವ್ಯತ್ಯಾಸ ನೋಡುವುದೇ ಇಲ್ಲ. ಮಾನವರಲ್ಲಿ ಪುಣ್ಯಾತ್ಮರೂ ಇರುತ್ತಾರೆ, ಪಾಪಾತ್ಮರೂ ಇರುತ್ತಾರೆ. ಕೊಳೆತ ಆಹಾರವನ್ನು ತಿನ್ನುವುದರಿಂದ ಆರೋಗ್ಯಕ್ಕೆ ಹೇಗೆ ಹಾನಿ ಬರುತ್ತದೋ ಅದೇ ರೀತಿ ಯಲ್ಲಿ ಪಾಪಾತ್ಮರನ್ನು ತಿನ್ನುವುದರಿಂದ ಕೆಡುಕಾಗು ತ್ತದೆ. ಅವರ ಪಾಪವೆಲ್ಲ ನಿನ್ನೊಳಗೇ ಸೇರಿ ನೀನು ಇನ್ನಷ್ಟು ಪಾಪಿಯೇ ಆಗುವೆ. ಆದುದರಿಂದ ನೀನು

ಪುಣ್ಯಾತ್ಮರನ್ನು ಮಾತ್ರ ತಿನ್ನುತ್ತ ಪುಣ್ಯವನ್ನೇ ನಿನ್ನಲ್ಲಿ ಸೇರಿಸಿಕೋ. ಯಾರು ಪುಣ್ಯಾತ್ಮರು, ಯಾರು ಪಾಪಾತ್ಮರು ಎಂದು ತಿಳಿಯಲು ನಾನು ನಿನಗೊಂದು ಹಾರವನ್ನು ಕೊಡುತ್ತೇನೆ. ಅದನ್ನು ನೀನು ಕೊರಳಲ್ಲಿ ಹಾಕಿಕೊಂಡಿರು. ನೀನು ಪುಣ್ಯಾತ್ಮರನ್ನು ಮುಟ್ಟಿದ ಕೂಡಲೇ ಆ ಹಾರವು ಹಸುರು ಬಣ್ಣಕ್ಕೆ ಬದಲಾಯಿಸುತ್ತದೆ. ಪಾಪಾತ್ಮರನ್ನು ಮುಟ್ಟಿದರೆ ಹಾರವು ಕೆಂಪು ಬಣ್ಣವಾಗುತ್ತದೆ" ಎಂದು ಹೇಳಿ ತನ್ನ ಕೊರಳಿನಲ್ಲಿದ್ದ ಬಿಳೀ ಹಾರವೊಂದನ್ನು ತೆಗೆದು ರಾಕ್ಷಸನ ಕೈಗೆ ಕೊಟ್ಟನು.

ರಾಕ್ಷಸನು ಆ ಹಾರವನ್ನು ತನ್ನ ಕೊರಳಿನಲ್ಲಿ ಧರಿಸಿ ಕೊಂಡು ಮುನೀಶ್ವರನನ್ನು ಹಿಡಿದು "ನೀವು ಪುಣ್ಯಾತ್ಮರು ತಾನೇ ? ಈಗ ನಿಮ್ಮನ್ನೇ ಮುರಿದು ತಿನ್ನುತ್ತೇನೆ" ಎಂದನು.

ಆದರೆ ಅವನು ಮುನೀಶ್ವರನನ್ನು ಮುಟ್ಟಿದ ಕೂಡಲೇ ಹಾರವು ಹಸಿರು ಬಣ್ಣವಾಗುವುದಕ್ಕೆ ಬದಲಾಗಿ, ಕೆಂಪು ಬಣ್ಣವಾಗಿತ್ತು.

ಅದನ್ನು ನೋಡಿ ರಾಕ್ಷಸನು ಮುನಿಯನ್ನು ಬಿಟ್ಟನು. ಮುನಿ ತನ್ನೊಳಗೆ "ನಾನು ರಾಕ್ಷಸನಿಗೆ ಹೇಳಿದ ಮಾತಿನ ಮೂಲಕ ನನ್ನ ಪುಣ್ಯವೆಲ್ಲಾ ಹೋಗಿ ಪಾಪಿಯಾದೆನೆಂದು ಕಾಣುತ್ತದೆ. ತಪ್ಪು ಮಾಡಿ ಬಿಟ್ಟೆನು !" ಎಂದುಕೊಳ್ಳುತ್ತ ಚಿಂತೆಯಿಂದ ತನ್ನ ಆಶ್ರಮಕ್ಕೆ ಹೋದನು.

ಆ ಮೇಲೆ ಅವನು ತನ್ನ ಮನಸ್ಸನ್ನು ಹಿಡಿತದಲ್ಲಿ ಇಟ್ಟುಕೊಳ್ಳಲಾಗದೆ ಚಡಪಡಿಸತೊಡಗಿದನು. ಎಷ್ಟೋ ವರ್ಷಗಳಿಂದ ಅವನು ಮಾಡಿದ ತಪಸ್ಸೆಲ್ಲಾ ವ್ಯರ್ಥವಾಗಿ ಹೋಗಿತ್ತು. ಹೀಗೇಕಾಯಿತೆಂಬುದು ಆತನಿಗೇ ತಿಳಿಯಲಿಲ್ಲ. ಅದನ್ನು ತಿಳಿದುಕೊಳ್ಳ ಬೇಕೆಂದು ಆ ಮುನೀಶ್ವರನು ಅರಣ್ಯದ ಮತ್ತೊಂದು ಕಡೆಯಲ್ಲಿದ್ದ ತನ್ನ ಗುರುವಿನ ಬಳಿಗೆ ಹೋದನು.

ನಡೆದ ಸಂಗತಿಯನ್ನು ಕೇಳಿ ಗುರು ಮುನಿ ತಲೆ ದೂಗುತ್ತ, "ನಿನ್ನ ಅನುಮಾನವನ್ನು ತೀರಿಸಬಲ್ಲವನು ಒಬ್ಬನೇ ಒಬ್ಬನಿದ್ದಾನೆ. ಅವನ ಹೆಸರು ಚಿರಂಜೀವಿ. ಪ್ರಸ್ತುತ ಅವನು ವಿಷ್ಣು ಪುರದಲ್ಲಿ



ದ್ದಾನೆ. ಅವನ ಬಳಿಗೆ ಹೋಗಿ ಕೇಳು" ಎಂದನು. ಮುನೀಶ್ವರನು ವಿಷ್ಣುಪುರಕ್ಕೆ ಹೋಗಿ, ಚಿರಂಜೀವಿಯನ್ನು ಹುಡುಕಿ ಕಂಡುಹಿಡಿದನು. ಚಿರಂಜೀವಿ ಸಾಮಾನ್ಯ ಮಾನವರ ಹಾಗೆಯೇ ಜೀವಿಸಿಕೊಂಡಿರುವವನು. ಅಂತಹವನು ತನ್ನ ಸಮಸ್ಯೆಯನ್ನು ತೀರಿಸುವನೆಂದರೆ ನಂಬಲಾಗದೆ ಹೋದರೂ, ತನ್ನ ಗುರುವೇ ಹೇಳಿದುದರಿಂದ, ಮುನೀಶ್ವರನು ತನ್ನ ಸಮಸ್ಯೆಯನ್ನು ಅವನೊಂದಿಗೆ ಹೇಳಿದನು.

ಎಲ್ಲವನ್ನೂ ಕೇಳಿ ಚಿರಂಜೀವಿ ಹೀಗೆಂದನು: "ನೀವು ತಪಸ್ಸು ಮಾಡಿ ಗುಡ್ಡದಷ್ಟು ಪುಣ್ಯ ಸಂಪಾದಿಸಿದವರಾದರೂ ವಿವೇಕವನ್ನು ಬೆಳೆಯಿಸಿಕೊಂಡ ಹಾಗೆ ಕಾಣುವುದಿಲ್ಲ. ನಿಮ್ಮನ್ನೇ ಹಿಡಿದು ತಿನ್ನಲು ನೋಡಿದ ಆ ರಾಕ್ಷಸ ಎಷ್ಟು ದುಷ್ಟನೆಂಬುದು ಗೊತ್ತಾಯಿತಲ್ಲವೆ? ಲೋಕದಲ್ಲಿರುವ ಪುಣ್ಯಾತ್ಮರ ಸಂಖ್ಯೆ ಸ್ವಲ್ಪವೇ ಆಗಿರುವಾಗ, ಆ ಸ್ವಲ್ಪ ಮಂದಿಯನ್ನೂ ಆತನು ತಿಂದು ತೀರಿಸಿ ಬಿಟ್ಟರೆ ಲೋಕವು ಪಾಪಾತ್ಮರಿಂದಲೇ ತುಂಬಿ ಹೋಗುವುದಿಲ್ಲವೇ? ಲೋಕವನ್ನು ಕಾಪಾಡಲು ಕೆಲವು ಮಂದಿ ಪುಣ್ಯಾತ್ಮರಿದ್ದರೇ ಸಾಕು. ಒಬ್ಬ ಸೂರ್ಯನು ಪ್ರಪಂಚಕ್ಕೆಲ್ಲ ಜೀವ ಕೊಡುವುದಿಲ್ಲವೆ? ಆ ಸೂರ್ಯನೇ ಇಲ್ಲದಿದ್ದರೆ ಲೋಕವೆಲ್ಲಿಯದು?"

"ನಿಜ ನಿಜ! ನನ್ನಿಂದ ಬಹುದೊಡ್ಡ ತಪ್ಪಾಯಿತು!" ಎಂದನು ಮುನೀಶ್ವರ. "ಅದಕ್ಕಾಗಿ ನೀವೇನೂ ಚಿಂತಿಸಬೇಕಾಗಿಲ್ಲ. ರಾಕ್ಷಸನ ಬಳಿಗೆ ಹೋಗಿ ನೀವು ಹಾರದ ಬಣ್ಣದ ಬದಲಿಕೆಯನ್ನು ತಪ್ಪಾಗಿ ಹೇಳಿದೆನೆಂದು ಹೇಳಿಬಿಡಿ. ಸರಿಯಾಗುತ್ತದೆ" ಎಂದನು ಚಿರಂಜೀವಿ.

"ಅವನು ನನ್ನ ಮಾತು ನಂಬುವನೇ?" ಎಂದು ಮುನೀಶ್ವರನು ಅನುಮಾನಿಸಿದನು. "ನೀವು ಹೇಳಿದ ಆಲೋಚನೆ ತಪ್ಪೆಂದು ರಾಕ್ಷಸನೊಂದಿಗೆ ಹೇಳಬೇಡಿ. ಬಣ್ಣದ ಬದಲಾವಣೆ ವಿಷಯ ತಪ್ಪು ಹೇಳಿದೆನ್ನಿರಿ. ಆತ್ಮರಕ್ಷಣೆಗಾಗಿ ಹಾಗೆ ಹೇಳಿದೆನೆಂದರೆ ಖಂಡಿತಾ ನಂಬುತ್ತಾನೆ" ಎಂದನು ಚಿರಂಜೀವಿ. ಮುನೀಶ್ವರನು ಮತ್ತೆ ರಾಕ್ಷಸನ ಬಳಿಗೆ ಹೋದನು.



ಅವನನ್ನು ನೋಡಿದ ಕೂಡಲೇ ರಾಕ್ಷಸನು, "ನಿಮ್ಮ ಬುದ್ಧೀ ಮಾತು ನನ್ನನ್ನು ಹಾಳು ಮಾಡಿತು. ಮನುಷ್ಯರಲ್ಲಿ ಪುಣ್ಯಾತ್ಮರೇ ಇರುವಂತಿಲ್ಲ. ಈ ವರೆಗೆ ನನಗೆ ಒಬ್ಬ ಪುಣ್ಯಾತ್ಮನೂ ಸಿಕ್ಕಲಿಲ್ಲ. ಕೆಟ್ಟ ಉಪವಾಸವೇ ಗತಿಯಾಯಿತು. ಏಕೆ ಹೀಗೆ ನನ್ನನ್ನು ಸಂಕಟ ಪಡಿಸುವಿರಿ?" ಎಂದನು.

ರಾಕ್ಷಸನು ತನ್ನ ಮಾತನ್ನು ನಡೆಯಿಸುವನೆಂಬುದಕ್ಕೆ ಮುನೀಶ್ವರನು ಸಂತೋಷಿಸಿ. "ಅದಕ್ಕೇ ಬಂದೆನು. ಮನುಷ್ಯರಲ್ಲಿ ಪಾಪಾತ್ಮರಿಗಿಂತಲೂ ಪುಣ್ಯಾತ್ಮರೇ ಹೆಚ್ಚು. ಅಸಲು ಮನುಷ್ಯ ಜನ್ಮವೇ ಉತ್ತಮವಾದುದಲ್ಲವೇ? ನಿನ್ನಿಂದ ನನ್ನ ಜೀವ ಉಳಿಸಿಕೊಳ್ಳಲಿಕ್ಕಾಗಿ ನಿನಗೆ ಬಣ್ಣದ ವಿಷಯದಲ್ಲಿ ನಾನು ಸುಳ್ಳು ಹೇಳಿದೆ. ನಿಜಕ್ಕೂ ಪುಣ್ಯಾತ್ಮರನ್ನು ಮುಟ್ಟಿದರೆ ಹಾರವು ಕೆಂಪಗಾಗುತ್ತದೆ. ಇದನ್ನು ಹೇಳಲೆಂದೇ ಬಂದೆನು" ಎಂದನು.

"ಈ ಮಾತು ನಿಜವೇನು?" ಎನ್ನುತ್ತಾ ರಾಕ್ಷಸನು ಕೋಪದಿಂದ ಮುನಿಯನ್ನು ಹಿಡಿದುಕೊಂಡನು. ಅವನು ತನ್ನನ್ನು ಮುಟ್ಟಿದ ಕೂಡಲೇ ಹಾರವು ಕೆಂಪು ಬಣ್ಣಕ್ಕೆ ತಿರುಗುವುದೆಂದೂ, ಕೂಡಲೇ ಅವನು ತನ್ನನ್ನು ಮುರಿದು ತಿನ್ನುವನೆಂದೂ ಮುನೀಶ್ವರನಿಗೆ ಗೊತ್ತಿತ್ತು. ಆದರೂ ತಪ್ಪು ತಿದ್ದಿಕೊಳ್ಳುವುದರಲ್ಲಿ ಅವನು ತನ್ನ ಪ್ರಾಣ ತ್ಯಾಗಕ್ಕೂ ಸಿದ್ಧನಾಗಿದ್ದನು.

ಆದರೆ ಊಹಿಸಲಾಗದಂತೆ ಹಾರವು ಹಸಿರು ಬಣ್ಣವಾಗಿ ಬಿಟ್ಟಿತ್ತು! "ಇದೇನು!" ಎಂದು ರಾಕ್ಷಸನು ಆಶ್ಚರ್ಯದಿಂದ ಬಾಯಿತೆರೆದನು. "ನಿನ್ನನ್ನು ಪುಣ್ಯಾತ್ಮರನ್ನು ತಿನ್ನಲು ಕಳುಹಿಸುವೆನಲ್ಲವೇ? ಆ ಪಾಪವೆಲ್ಲ ನನ್ನನ್ನು ಸುತ್ತಿಕೊಂಡಿತು." ಎಂದ ಮುನೀಶ್ವರ.

ಆದರೆ ನಿಜವಾದ ಕಾರಣ ಮುನೀಶ್ವರನಿಗೆ ಗೊತ್ತಾಯಿತು. ತನ್ನ ಪ್ರಾಣವನ್ನೇ ಬಿಡಲು ಸಿದ್ಧನಾಗಿ ಒಂದು ಒಳ್ಳೆಯ ಕೆಲಸ ಮಾಡುವೆನೆಂದುಕೊಂಡ ಕೂಡಲೇ ತನ್ನ ಪಾಪವೆಲ್ಲಾ ಹೋಯಿತೆಂದು ಸ್ಪಷ್ಟವಾಯಿತು. ಒಂದು ಕೆಟ್ಟ ಕೆಲಸದ ಬೆಲೆ ಕೂಡಾ ಇಲ್ಲದ ತನ್ನ ತಪಸ್ಸು ನಿರುಪಯೋಗವೆಂದು ಮುನೀಶ್ವರನು ತಿಳಿದುಕೊಂಡನು.

ಇನ್ನು ಮೇಲೆ ತಾನು ಚಿರಂಜೀವಿಯ ಬಳಿಗೆ ಹೋಗಿ ಒಳ್ಳೆಯ ಕೆಲಸಗಳನ್ನು ಮಾಡುತ್ತ ಕಾಲ ಕಳೆಯಬೇಕೆಂದು ನಿಶ್ಚಯಿಸಿ, ಅವನು ಚಿರಂಜೀವಿಯ ಬಳಿಗೇ ಹೋದನು.

ಮುನೀಶ್ವರನ ಅಭಿಪ್ರಾಯವನ್ನು ಕೇಳಿ ಚಿರಂಜೀವಿ, "ನಿಜವೇ ತಪಸ್ಸಿನಿಂದ ತಪಸ್ಸು ಮಾಡುವವನಿಗೆ ಮಾತ್ರವೇ ಲಾಭ. ಒಳ್ಳೆಯ ಕೆಲಸ ಮಾಡುವವನಿಂದ ಅನೇಕ ಮಂದಿ ಲಾಭ ಹೊಂದುತ್ತಾರೆ." ಎಂದನು.





# ವಸಿಷ್ಠ

ದೇವರ್ಷಿಗಳಲ್ಲಿ ಪ್ರಥಮನಾಗಿರುವವನು ಬೃಹಸ್ಪತಿ. ಸಪ್ತರ್ಷಿಗಳಲ್ಲಿ ಅಗ್ರಗಣ್ಯನಾಗಿರುವವನು ವಸಿಷ್ಠ. ಬೃಹಸ್ಪತಿಯು ಹಾಗಯೇ ಸಪ್ತರ್ಷಿಗಳು ಕೂಡಾ ನಕ್ಷತ್ರ ರೂಪದಲ್ಲಿ ಆಕಾಶದ ಉತ್ತರ ದಿಕ್ಕಿನಲ್ಲಿವರು. ನಿಜಕ್ಕೂ ಬೃಹಸ್ಪತಿ (ಗುರು) ಸೂರ್ಯನ ಸುತ್ತಲೂ ತಿರುಗುವ ಗ್ರಹ ಮಾತ್ರವೇ. ಆದರೆ ಸಪ್ತರ್ಷಿಗಳು ಸೂರ್ಯನ ಜಾತಿಗೇ ಸೇರಿದ ನಕ್ಷತ್ರಗಳು. ಆ ಸಪ್ತರ್ಷಿ ಮಂಡಲದಲ್ಲಿ ವಸಿಷ್ಠನ ಹೆಸರಿರುವ ನಕ್ಷತ್ರದ ಪಕ್ಕದಲ್ಲಿ ಕಂಡೂ ಕಾಣದಂತಿರುವ ನಕ್ಷತ್ರ ವಸಿಷ್ಠನ ಹೆಂಡತಿ ಅರುಂಧತಿಯದು.

ವಸಿಷ್ಠನು ಮದುವೆ ಮಾಡಿಕೊಳ್ಳಲು ನಿಶ್ಚಯಿಸಿ, ಮರಳನ್ನು ಅನ್ನವನ್ನಾಗಿ ಬೇಯಿಸಿಕೊಡುವ ಕನ್ಯೆ ಎಲ್ಲಿರುವಳೆಂದು ಹುಡುಕುತ್ತಾ ಮಾದಿಗರಕೇರಿಗೆ ಹೋದನು. ಅಲ್ಲಿ ಒಬ್ಬಳು ಹುಡುಗಿ ಅವನು ಬಯಸಿದ ಹಾಗೆಯೇ ಮರಳನ್ನು ಬೇಯಿಸಿ ಅನ್ನ ಮಾಡಿ ಬಡಿಸಿದಳು. ಈ ಅಡಿಗೆ ಮಾಡಿದವಳು ತನ್ನ ಹೆಂಡತಿಯಾದರೆ ಮಾತ್ರ ತಾನು ಊಟ ಮಾಡುವೆನೆಂದನು ವಸಿಷ್ಠ. ಆ ರೀತಿಯಾಗಿ ವಸಿಷ್ಠನಿಗೆ ಆ ಕನ್ಯೆ ಅರುಂಧತಿಯೊಂದಿಗೆ ಮದುವೆಯಾಗಿತ್ತು.

ವಸಿಷ್ಠನಿಗೆ ವಿಶ್ವಾಮಿತ್ರನೊಂದಿಗೆ ತೀರದ ಹಗೆಯಿತ್ತು. ಇಬ್ಬರೂ ಸರಸ್ವತೀ ನದಿಯ ಆಚೆ ಈಚೆ ತೀರಗಳಲ್ಲಿ ವಾಸಮಾಡಿಕೊಂಡಿದ್ದರು. ಒಂದು ಸಾರಿ ವಿಶ್ವಾಮಿತ್ರನು ವಸಿಷ್ಠನನ್ನು ಕೊಲ್ಲಲು ನಿಶ್ಚಯಿಸಿ ಅವನನ್ನು ಕರಕೊಂಡು ಬರುವಂತೆ ನದಿಗೆ ಆಜ್ಞೆ ಮಾಡಿದನು. ವಸಿಷ್ಠನು ಸಾಯುವುದು ಸರಸ್ವತಿಗೆ ಇಷ್ಟವಿರಲಿಲ್ಲ. ಆದರೆ ಹೇಳಿದಂತೆ ಮಾಡದಿದ್ದರೆ ವಿಶ್ವಾಮಿತ್ರನು ಶಪಿಸುವನೆಂಬ ಭಯವಿತ್ತು. ಆದುದರಿಂದ ಸರಸ್ವತಿ ವಸಿಷ್ಠನನ್ನು ಈಚೆಯ ತೀರಕ್ಕೆ ಕರೆದುಕೊಂಡುಬಂದು, ವಿಶ್ವಾಮಿತ್ರನು ಬರುವುದರೊಳಗೆ ಆಚೆಯ ಬದಿಗೆ ಒಯ್ದುಬಿಟ್ಟಳು.

ಈ ಇಬ್ಬರು ಋಷಿಗಳ ನಡುವೆ ಎದ್ದಿದ್ದ ವೈರವು ಅನೇಕ ಅನರ್ಥಗಳಿಗೆ ದಾರಿತೆಗೆಯಿತು.

ಒಂದು ಸಾರಿ ವಸಿಷ್ಠನು ಮಿತ್ರಾಸಹನೆಂಬ ರಾಜನ ಮನೆಗೆ ಅತಿಥಿಯಾಗಿ ಹೋದನು. ಆ ರಾಜನ ಮೇಲೆ ಒಬ್ಬ ರಾಕ್ಷಸನಿಗೆ ದ್ವೇಷವಿತ್ತು. ರಾಕ್ಷಸನು ಮೋಸದಿಂದ ವಸಿಷ್ಠನ ಭೋಜನದಲ್ಲಿ ನರಮಾಂಸ ಬೀಳುವ ಹಾಗೆ ಮಾಡಿದನು. ತನ್ನ ಭೋಜನದಲ್ಲಿ ರಾಜನು ಬುದ್ಧಿ ಪೂರ್ವಕವಾಗಿಯೇ ನರಮಾಂಸ

ಬೀಳಿಸಿದನೆಂದು ತಿಳಿದು ವಸಿಷ್ಠನು ಆಗ್ರಹಿಸಿ ಅವನನ್ನು ರಾಕ್ಷಸ ಗುಣದವನಾಗೆಂದು ಶಪಿಸಿದನು. ರಾಜನೂ ಸಹ ಕೋಪಗೊಂಡು ವಸಿಷ್ಠನನ್ನು ಶಪಿಸಲು ನೀರು ತೆಗೆದುಕೊಂಡನು. ಆದರೆ ಸಂಯ ಮನದಿಂದ ಆ ಶಾಪ ಜಲವನ್ನು ವಸಿಷ್ಠನ ಮೇಲೆ ಚೆಲ್ಲದೆ, ತನ್ನ ಪಾದಗಳ ಮೇಲೆಯೇ ಸುರಿದು ಕೊಂಡನು. ಅದರಿಂದ ಅವನಿಗೆ ಕಲ್ಮಾಷಪಾದನೆಂಬ ಹೆಸರು ಬಂತು.

ಆದರೂ ಕಲ್ಮಾಷ ಪಾದನಿಗೆ ವಸಿಷ್ಠನ ಶಾಪ ತಗಲದಿರಲಿಲ್ಲ. ಅವನು ದಾರಿಯಲ್ಲಿ ನಡೆಯುತ್ತಿರು ವಾಗ ವಸಿಷ್ಠನ ಮಗನಾದ ಶಕ್ತಿ ಎಂಬವನನ್ನು ನೋಡಿ ಅವನನ್ನು ಹೊಡೆಯಲು, ಇಬ್ಬರೂ ಗುದ್ದಾಡಿಕೊಳ್ಳ ತೊಡಗಿದರು. ಅದನ್ನು ನೋಡಿ ವಿಶ್ವಾಮಿತ್ರನು ಒಬ್ಬ ರಾಕ್ಷಸನನ್ನು ಕಲ್ಮಾಷಪಾದ ನೊಳಗೆ ಆವಾಹಿಸುವಂತೆ ಬಿಟ್ಟನು. ಆಗ ಕಲ್ಮಾಷ ಪಾದನು ರಾಕ್ಷಸ ಬಲದಿಂದ ಶಕ್ತಿಯನ್ನೂ, ವಸಿಷ್ಠನ ನೂರು ಮಂದಿ ಮಗಂದಿರನ್ನೂ ಕೊಂದು ಬಿಟ್ಟನು.

ಈ ಪುತ್ರಶೋಕವನ್ನು ತಾಳಿಕೊಳ್ಳಲಾಗದೆ ವಸಿಷ್ಠನು ಆತ್ಮಹತ್ಯ ಮಾಡಿಕೊಳ್ಳಲು ಅಗ್ನಿಗೆ ಹಾರಿದನು. ಆದರೆ ಅಗ್ನಿ ತಣ್ಣಗಾಯಿತು. ಸಮುದ್ರ ದಲ್ಲಿ ಧುಮುಕಿದರೆ, ಸಮುದ್ರವು ವಸಿಷ್ಠನನ್ನು ಪದೇ ಪದೇ ತೀರಕ್ಕೆ ದೂಡಿಬಿಟ್ಟಿತು.

ಹೀಗೆ ವಸಿಷ್ಠನು ಎಷ್ಟುಸಾರಿ - ಆತ್ಮಹತ್ಯಕ್ಕೆ ಪ್ರಯತ್ನಿಸಿದರೂ ವ್ಯರ್ಥವಾಯಿತು.

ಕಡೆಗೆ ಅವನು ತನ್ನ ಆಶ್ರಮಕ್ಕೆ ಹಿಂದಿರುಗಿ ಬರುವಾಗ ಗರ್ಭಿಣಿಯಾಗಿದ್ದ ಅವನ ಹಿರಿಯ ಸೊಸೆಯ ಉದರದೊಳಗಿನಿಂದ ವೇದ ಘಠನ ಧ್ವನಿ ಕೇಳಿಸಿತು, ಮೊಮ್ಮಗನನ್ನು ನೋಡಿ ಸತ್ತು ಹೋಗೋಣವೆಂದುಕೊಂಡು ವಸಿಷ್ಠನು ಆಶ್ರಮ ದಲ್ಲೇ ಇರತೊಡಗಿದನು.

ರಾಕ್ಷಸನಿಂದ ಆವಾಹಿಸಲ್ಪಟ್ಟ ಕಲ್ಮಾಷಪಾದನು ಒಂದು ದಿನ ವಸಿಷ್ಠನ ಸೊಸೆಯನ್ನೂ ಓಡಿಸಿಕೊಂಡು ಬಂದನು. ವಸಿಷ್ಠನು ಅವನ ಮೇಲೆ ಮಂತ್ರ ಜಲ ವನ್ನು ಚೆಲ್ಲಿದಕೊಡಲೇ ಕಲ್ಮಾಷಪಾದನಿಗೆ ಶಾಪ ಮುಕ್ತಿಯಾಗಿ ದುಷ್ಟ ಶಕ್ತಿಗಳು ಹೋಗಿ, ಅವನು ಎಂದಿನಂತಾದನು.

ಆ ಮೇಲೆ ವಸಿಷ್ಠನು ಸೂರ್ಯವಂಶದ ರಾಜರಿಗೆ ಕುಲಗುರುವಾಗಿದ್ದನು, ದಶರಥನಿಗೆ ಪುತ್ರ ಭಾಗ್ಯ ಬರಬೇಕೆಂದು ಪುತ್ರಕಾಮೇಷ್ಟಿಯಾಗ ಮಾಡಿಸಿದನು. ಸಂವರಣನೆಂಬ ರಾಜನು ತಪತಿ ಎಂಬ ಸೂರ್ಯನ ಮಗಳನ್ನು ಮೋಹಿಸಿ, ವಿರಹಬಾಧೆಯಿಂದ ತಪಿಸಿ ಕೊಂಡಿರುವುದನ್ನು ನೋಡಿ, ಅವನ ಪುರೋಹಿತನಾದ ವಸಿಷ್ಠನು ಸೂರ್ಯನೊಂದಿಗೆ ಮಾತಾಡಿ, ಅವರಿಬ್ಬ ರನ್ನೂ ವಿವಾಹದಿಂದ ಒಂದು ಗೂಡಿಸಿದನು.





# ಸುರಪುಷ್ಪಮಾಲೆ

ವಿದರ್ಭ ರಾಜನಾದ ಭೋಜನ ಮಗಳು ಇಂದುಮತಿ. ಅವಳು ಶಾಪದಿಂದಾಗಿ ಮಾನವ ಜನ್ಮದಲ್ಲಿ ಹುಟ್ಟಿದ ಅಪ್ಸರೆ. ಅವಳು ಇಂದ್ರನ ಸಭೆಯಲ್ಲಿ ನೃತ್ಯಮಾಡುವ ಹರಿಣಿ ಎಂಬ ಅಪ್ಸರೆಯಾಗಿದ್ದಳು.



ತೃಣಬಿಂದು ಮಹಾಮುನಿ ತಪಸ್ಸು ಮಾಡು ತ್ತಿರುವಾಗ, ಅವನ ತಪಸ್ಸನ್ನು ಕೆಡಿಸಬೇಕೆಂದು ಹೇಳಿ ಇಂದ್ರನು ಹರಿಣಿಯನ್ನು ಭೂಮಿಗೆ ಕಳುಹಿಸಿದನು. ತೃಣಬಿಂದು ದೊಡ್ಡ ತಪಸ್ಸಿ ನಿಂದ ಇಂದ್ರಪದವಿಗೆ ಬರುತ್ತಾನೇನೋ ಎಂದು ಇಂದ್ರನಿಗೆ ಭಯ.



ಹರಿಣಿಯೇನೋ ತೃಣಬಿಂದುವಿನ ತಪಸ್ಸನ್ನು ಕೆಡಿಸಿದಳಾದರೂ, ಅವನು ಅವಳಿಗೆ ವಶನಾಗದೆ, ಮಾನವಜನ್ಮ ಎತ್ತುವಂತೆ ಅವಳನ್ನು ಶಪಿ ಸಿದನು. ಶಾಪವಿಮೋಚನೆಗಾಗಿ ಹರಿಣಿ ಪ್ರಾರ್ಥಿಸಿಕೊಂಡಾಗ, ಪೂರ್ವಜನ್ಮದ ನೆನಪು ಬಂದ ಕೂಡಲೇ ಶಾಪವಿಮೋಚನೆಯಾಗುವು ದೆಂದನು ತೃಣಬಿಂದು ಮುನಿ.



ಇಂದುಮತಿಗೆ ಯುಕ್ತವಯಸ್ಸು ಬಂದ ಕೂಡಲೇ ಭೋಜನು ಅವಳಿಗೆ ಸ್ವಯಂವರವನ್ನು ಪ್ರಕಟಿಸಿ ನಾನಾ ದೇಶಗಳ ರಾಜರನ್ನು ಆಹ್ವಾನಿಸಿದನು.



ಅಯೋಧ್ಯೆಯ ರಾಜನಾದ ಅಜನು ಸ್ವಯಂವರಕ್ಕೆ ಬರುತ್ತಿರುವಾಗ, ಒಂದು ಆನೆ ಅವನನ್ನು ಇದಿರಿಸಿತು. ಅಜನು ಅದರೊಂದಿಗೆ ಹೋರಾಡಿ ಅದನ್ನು ಕೊಂದನು.



ಸತ್ತ ಆನೆಯಿಂದ ಒಬ್ಬ ಗಂಧರ್ವನು ಹೊರಟು ತಾನು ಶಾಪ ಕಾರಣದಿಂದ ಆನೆಯಾದೆನೆಂದೂ, ತನಗೀಗ ಶಾಪವಿಮೋಚನೆಯಾಯಿತೆಂದೂ ಹೇಳಿ, ಅಜನಿಗೆ ಕೃತಜ್ಞತೆಯ ಕುರುಹಾಗಿ ಸಮ್ಮೋಹನಾಸ್ತ್ರವನ್ನು ಕೊಟ್ಟನು.



ಸ್ವಯಂವರದಲ್ಲಿ ಇಂದುಮತಿ ಅಜನನ್ನು ಆರಿಸಿ ಅವನ ಕೊರಳಿಗೆ ವರಮಾಲೆ ಹಾಕಿದಳು. ಇತರ ರಾಜರಿಗೆಲ್ಲಾ ಇಂದುಮತಿಯನ್ನೇ ಮದುವೆಯಾಗ ಬೇಕೆಂದಿದ್ದುದರಿಂದ, ಅವರೆಲ್ಲರೂ ಅಸೂಯೆ ಯಿಂದ ಅಜನ ಮೇಲೆ ಬಿದ್ದರು.



ಅಜನು ಅವರೆಲ್ಲರನ್ನೂ ಇದಿರಿಸಿ ಯುದ್ಧ ಮಾಡಿದನು. ಗಂಧರ್ವನು ಕೊಟ್ಟ ಸಮ್ಮೋಹ ನಾಸ್ತ್ರವನ್ನು ಪ್ರಯೋಗಿಸಿ ಅಜನು ಕ್ಷಣ ಮಾತ್ರದಲ್ಲಿ ಎಲ್ಲರನ್ನೂ ಮೂರ್ಛೆ ಬೀಳಿಸಿದನು.



ತರುವಾಯ ಅಜನು ಇಂದುಮತಿಯೊಂದಿಗೆ ಅಯೋಧ್ಯೆಗೆ ಬಂದು ಅವಳೊಂದಿಗೆ ರಾಜ್ಯ ಪಾಲನೆ ಮಾಡಿದನು.



ಆ ದಂಪತಿಗಳಿಗೆ ಒಬ್ಬ ಮಗನು ಹುಟ್ಟಿದನು. ಅವನೇ ಕಾಲಕ್ರಮದಲ್ಲಿ ರಾಮಲಕ್ಷ್ಮಣಾದಿಗಳಿಗೆ ತಂದೆಯಾದ ಪುರಾಣ ಪ್ರಸಿದ್ಧನಾದ ದಶರಥನು.



ಬಹಳ ಕಾಲದ ಮೇಲೆ ಒಂದು ದಿನ ನಾರದನು ಸ್ವರ್ಗದಿಂದ ಭೂಮಿಗೆ ಇಳಿಯುತ್ತಿದ್ದಾಗ ಅವನ ವೀಣೆಯನ್ನು ಅಲಂಕರಿಸಿದ ಸುರಪುಷ್ಪಮಾಲೆ ಜಾರಿ ಕೆಳಗೆ ಬಿತ್ತು.



ವನವಿಹಾರ ಮಾಡಿಕೊಂಡಿದ್ದ ಇಂದುಮತಿಯ ಮೇಲೆಯೇ ಆ ಮಾಲೆ ಬಿತ್ತು. ಮರುಕ್ಷಣದಲ್ಲಿ ಅವಳಿಗೆ ಪೂರ್ವಜನ್ಮದ ನೆನಪು ಬಂದು ಶಾಪ ಹೋಯಿತು. ಇಂದುಮತಿಯ ದೇಹ ಬಿಟ್ಟು ಹರಿಣಿ ಅಪ್ಸರೆಯಾಗಿ ಸ್ವರ್ಗಕ್ಕೆ ಹೋದಳು.



# ಅಗ್ನಿ

ವಿಶ್ವಾನರನೆಂಬ ಒಬ್ಬ ಬ್ರಾಹ್ಮಣನು ಬಹಳ ಕಾಲ ಮಕ್ಕಳಿಲ್ಲದೆ ಕಾಶಿಗೆ ಹೋಗಿ, ತನಗೊಬ್ಬ ಪುತ್ರನು ಹುಟ್ಟಬೇಕೆಂಬ ಬಯಕೆಯಲ್ಲಿ ಶಿವನನ್ನು ಕುರಿತು ತಪಸ್ಸು ಮಾಡಿದನು. ಅವನ ತಪಸ್ಸಿಗೆ ಮೆಚ್ಚಿ ಶಿವನು ಪ್ರತ್ಯಕ್ಷನಾಗಿ ಅವನಿಗೊಬ್ಬ ಪುತ್ರನು ಹುಟ್ಟುವಂತೆ ವರವಿತ್ತನು. ಆ ವರದ ಪ್ರಭಾವದಿಂದ ವಿಶ್ವಾನರನ ಹೆಂಡತಿ ಗರ್ಭಿಣಿಯಾಗಿ ಸಕಾಲದಲ್ಲಿ ಒಬ್ಬ ಮಗನನ್ನು ಹಡೆದಳು. ಶಿವನ ವರದಿಂದ ಹುಟ್ಟಿದ ಆ ಮಗುವಿಗೆ ದೇವತೆಗಳು ಅಗ್ನಿ ಎಂದು ನಾಮಕರಣ ಮಾಡಿದರು. ವಿಶ್ವಾನರನ ಮಗನಾದುದರಿಂದ ವೈಶ್ವಾನರನೆಂಬ ಹೆಸರೂ ಅವನಿಗೆ ಉಂಟಾಯಿತು.

ಒಂದು ದಿನ ನಾರದನು ವೈಶ್ವಾನರನನ್ನು ನೋಡಲು ಬಂದು, ಅವನ ತಂದೆಯೊಂದಿಗೆ, "ನಿನ್ನ ಮಗನಾದ ಅಗ್ನಿಗೆ ಹನ್ನೆರಡನೆಯ ವಯಸ್ಸಿನಲ್ಲಿ ಪ್ರಾಣಗಂಡವಿದೆ" ಎಂದು ಹೇಳಿ ಹೊರಟು ಹೋದನು. ಇದನ್ನು ಕೇಳಿ ವಿಶ್ವಾನರನು ಚಿಂತೆಯಿಂದ ಕೊರಗತೊಡಗಿದನು. ಆಗ ಅಗ್ನಿ ತನ್ನ ತಂದೆಗೆ ಧೈರ್ಯ ಹೇಳಿ, ಕಾಶಿಗೆ ಹೋಗಿ ಶಿವನನ್ನು ಕುರಿತು ತಪಸ್ಸು ಮಾಡಲು ಪ್ರಾರಂಭಿಸಿದನು. ಅಗ್ನಿಯ ತಪಸ್ಸು ತೀವ್ರವಾಯಿತು. ಯಾರು ತಪಸ್ಸು ಮಾಡುತ್ತಿದ್ದರೂ ಇಂದ್ರನಿಗೆ ಭಯವೇ! ಅವನ ತಪಸ್ಸನ್ನು ಕೆಡಿಸಬೇಕೆಂದು ಸ್ವತಃ ಇಂದ್ರನೇ ಅವನ ಮುಂದೆ ಬಂದು "ನಿನಗೆ ಏನು ವರಬೇಕೋ ಕೇಳಪ್ಪ, ಕೊಡುತ್ತೇನೆ" ಎಂದನು.

"ನಾನು ನಿನ್ನ ವರಕ್ಕಾಗಿ ತಪಸ್ಸು ಮಾಡುವುದಲ್ಲ. ನನಗೆ ಬೇಕಾದುದನ್ನು ಶಿವನೇ ಕೊಡುತ್ತಾನೆ" ಎಂದು ಅಗ್ನಿ ಇಂದ್ರನನ್ನು ತಿರಸ್ಕರಿಸಿ ಉತ್ತರ ಕೊಟ್ಟನು.

ಆದನ್ನು ಕೇಳಿ ಇಂದ್ರನು ಕುಪಿತನಾಗಿ ತನ್ನ ವಜ್ರಾಯುಧದಿಂದ ಅಗ್ನಿಯನ್ನು ಹೊಡೆದನು. ಆ ಏಟಿನಿಂದ ಅಗ್ನಿ ಮೂರ್ಛಿತನಾಗಿ ಬಿದ್ದನು. ನಾರದನು ಹೇಳಿದ ಪ್ರಾಣಭಯವು ಅಗ್ನಿಗೆ ಈ ವಿಧವಾಗಿ ಉಂಟಾಯಿತು.

ಆಗಲೇ ಶಿವನು ಪ್ರತ್ಯಕ್ಷನಾಗಿ "ಅಪ್ಪಾ, ಅಗ್ನೀ! ಏಳು! ದೀರ್ಘಾಯುಷ್ಮಂತನಾಗಿ ಇರು!" ಎಂದು ಆಶೀರ್ವಾದ ಮಾಡಿ, ಆ ಹುಡುಗನನ್ನು ಒಂದು ಲೋಕಕ್ಕೆ ಅಧಿಪತಿಯನ್ನಾಗಿಯೂ ಮಾಡಿದನು. ಅವನಿಗೆ ದೇವತಾ ರೂಪ ಬಂದಿತು. ಇಂದ್ರಾಧಿಪತ್ಯ

ದಲ್ಲಿದ್ದ ಆಗ್ನೇಯ ಭಾಗವು ಅಗ್ನಿಯ ಅಧಿಪತ್ಯಕ್ಕೆ ಸೇರಿತು. ಅಷ್ಟದಿಕ್ಪಾಲಕರಲ್ಲಿ ಅವನೂ ಒಬ್ಬನಾದನು. ಅಲ್ಲದೆ ಅವನು ಅಷ್ಟವಸುಗಳಲ್ಲಿ ಕೂಡಾ ಒಬ್ಬ ನೆನಿಸಿದನು. ಯಜ್ಞ ಯಾಗಗಳ ಹವ್ಯಗಳನ್ನು ಆಯಾ ದೇವತೆಗಳಿಗೆ ಸೇವಿಸುವ ಕೆಲಸವೂ ಅಗ್ನಿಯ ದಾಯಿತು. ಅದರಿಂದ ಅವನಿಗೆ ಹವ್ಯವಾಹನ ನೆಂಬ ಹೆಸರು ಬಂತು. ಸ್ವಾಹಾದೇವಿ ಎಂಬುವ ಳೊಂದಿಗೆ ಅವನ ಮದುವೆಯೂ ಆಯಿತು. ಟಗರು ಅವನ ವಾಹನ.

ಒಂದು ಸಾರಿ ಭೃಗು ಮಹರ್ಷಿ ದೂರ ಪ್ರಯಾಣ ಮಾಡಬೇಕಾಗಿ ಬಂತು. ತಾನು ಹಿಂದಿರುಗಿ ಬರುವ ವರೆಗೆ ಅಗ್ನಿಯನ್ನು ಕಾಪಾಡಿಕೊಂಡಿರುವಂತೆ ತನ್ನ ಹೆಂಡತಿಯೊಂದಿಗೆ ಹೇಳಿ ಹೊರಟುಹೋದನು. ಆಮೇಲೆ ಪುಲೋಮನೆಂಬ ರಾಕ್ಷಸನು ಬಂದು ಭೃಗು ಪತ್ನಿಯನ್ನು ನೋಡಿ, "ಯಾರಿವಳು ?" ಎಂದು ಅಗ್ನಿಯನ್ನು ಕೇಳಿದನು.

"ಇವಳು ಭೃಗುವಿನ ಹೆಂಡತಿ ಪುಲೋಮೆ." ಎಂದನು ಅಗ್ನಿ.

"ಇವಳು ನನ್ನ ಹೆಸರಿನವಳು. ನಾನೇ ಇವಳನ್ನು ಮದುವೆಯಾಗಬೇಕಿತ್ತು." ಎಂದು ಹೇಳಿ ಪುಲೋಮನು ಪುಲೋಮೆಯನ್ನು ಎತ್ತಿಕೊಂಡು ಹೋಗಲು ನೋಡಿದನು. ಆಗ ಪುಲೋಮೆಯ ಮಗನು ರಾಕ್ಷಸ ಪುಲೋಮನನ್ನು ಕೊಂದುಬಿಟ್ಟನು. ಭೃಗು ಬಂದಾಗ ಪುಲೋಮೆ ಅಗ್ನಿಯಿಂದ ತನಗೆ ಆಪದವು ಬಂತೆಂದು ಚಾಡಿ ಹೇಳಿದುದರಿಂದ, ಭೃಗು ಕೋಪಗೊಂಡು ಸರ್ವಭಕ್ಷಕನಾಗುವಂತೆ ಅಗ್ನಿಯನ್ನು ಶಪಿಸಿದನು.

ಇದರಿಂದ ಅಗ್ನಿಗೂ ಸಿಟ್ಟು ಬಂದು ಮಾತಾಡದೆ ಮೂಲೆಯಲ್ಲಿ ಮುದುಡಿ ಕುಳಿತನು. ದೇವತೆಗಳಿಗೆ ಹವ್ಯಗಳನ್ನು ಒಯ್ಯುವ ಕೆಲಸ ನಿಂತುಹೋಯಿತು. ದೇವತೆಗಳು ವಿಷ್ಣುವಿನ ಬಳಿಗೆ ಹೋಗಿ ಮೊರೆ ಯಿಟ್ಟರು. ವಿಷ್ಣು ದೇವತೆಗಳನ್ನು ಕರೆದುಕೊಂಡು ಅಗ್ನಿಯ ಬಳಿಗೆ ಬಂದು ಅವನನ್ನು ಹೊಗಳಿ, "ನೀನು ಸರ್ವಭಕ್ಷಕನಾದರೇನು ? ನೀನು ನಿತ್ಯ ಶುಚಿತ್ವ ಉಳ್ಳವನಾಗಿ, ಸಮಸ್ತವನ್ನೂ ಪವಿತ್ರಗೊಳಿಸುವ ಜ್ವಾಲಾ ರೂಪನಾಗು" ಎಂದು ವರವಿತ್ತನು. ಮತ್ತೆ ಎಂದಿನಂತೆ ಅಗ್ನಿಯಿಂದ ದೇವಕಾರ್ಯ ಸಾಗಿತು.

ಒಮ್ಮೆ ಶ್ವೇತಕಿ ಎಂಬ ರಾಜನು ಮಾಡಿದ ಯಜ್ಞ ದಿಂದ ಅಗ್ನಿಗೆ ಅಜೀರ್ಣವಾಯಿತು. ಬ್ರಹ್ಮನು ಅವನ ಆರೋಗ್ಯವನ್ನು ಸರಿಪಡಿಸಲು ಔಷಧ ಮೂಲಿಕೆಗಳು ತುಂಬಿದ ಖಾಂಡವವನವನ್ನು ದಹಿಸ ಬೇಕೆಂದು ಹೇಳಿದನು. ಆ ಪ್ರಕಾರ ಅಗ್ನಿ ಕೃಷ್ಣಾರ್ಜು ನರ ಸಹಾಯದಿಂದ ಖಾಂಡವವನವನ್ನು ದಹಿಸಿ, ರೋಗದಿಂದ ಮುಕ್ತನಾಗಿ ಅರ್ಜುನನಿಗೆ ಗಾಂಡೀವ ವನ್ನೂ, ಕೃಷ್ಣನಿಗೆ ಚಕ್ರವನ್ನೂ ಕೊಟ್ಟನು.



# ಕೊಪ್ಪರಿಗೆ ಚಿನ್ನ

ಕಮಲಾಪುರದ ಜಮೀನ್ದಾರನು ಕೈಯಲ್ಲಿ ಎಲುಬಿಲ್ಲದವನಹಾಗೆ ದಾನಧರ್ಮಗಳನ್ನು ಮಾಡಿ ಮಾಡಿ ಮುದುಕನಾದನು. ಅಷ್ಟು ಹೊತ್ತಿಗೆ ಅವನ ಭಂಡಾರವು ಪೂರಾ ಕ್ಷೀಣಿಸಿಹೋಯಿತು.

ಅವನ ಅರಮನೆಯ ಕೋಟೆಯ ಸಿಂಹದ್ವಾರದಿಂದ ಉತ್ತರದಿಕ್ಕಿನಲ್ಲಿ ಮೂರು ಮೈಲು ದೂರದ ವರೆಗೆ ಕಾಲು ದಾರಿಯೊಂದಿತ್ತು. ಆ ದಾರಿಯ ಕೊನೆಯಲ್ಲಿ ಗುಡ್ಡಗಳ ನಡುವೆ ಒಂದು ಸರೋವರವಿತ್ತು. ಅದು ಎಂದಿಗೂ ಬತ್ತದ ನೀರು. ಅದನ್ನು ಊರೊಳಗೆ ತರುವ ಆಲೋಚನೆಯಲ್ಲಿಯೇ ಇದ್ದು, ಕಡೆಗೆ ಜಮೀನ್ದಾರನು ರೋಗಕ್ಕೆ ಬಿದ್ದು, ಸಾಯುವ ಸ್ಥಿತಿಗೆ ಬಂದನು.

ಸಾಯುವ ಮೊದಲು ಊರೊಳಗಿನ ಹಿರಿಯರನ್ನು ಕರೆಯಿಸಿ, "ನಿಮಗೆ ಒಂದು ರಹಸ್ಯವನ್ನು ಹೇಳಿಬಿಡುತ್ತೇನೆ. ನನಗೆ ಮಕ್ಕಳಿಲ್ಲದ್ದರಿಂದ ನೀವೇ ನನ್ನ ಮಕ್ಕಳು. ಇಲ್ಲಿಂದ ಗುಡ್ಡದ ಸರೋವರಕ್ಕೆ ಹೋಗುವ ಕಾಲುದಾರಿಯ ಬುಡದಲ್ಲಿ ನನ್ನ ತಂದೆ ಕೊಪ್ಪರಿಗೇ ತುಂಬಾ ಚಿನ್ನವನ್ನು ಹುಗಿದಿಟ್ಟಿದ್ದಾರಂತೆ. ಅಂಥಾ ಕಷ್ಟ ಬಂದರೆ ತೆಗೆದುಕೊಳ್ಳಲಿಕ್ಕಾಗಿ. ನಾನು ಸತ್ತ ಮೇಲೆ ಗ್ರಾಮಸ್ಥರು ಅದನ್ನು ಅಗೆದು ತೆಗೆದು ಸಮನಾಗಿ ಹಂಚಿಕೊಂಡುಬಿಡಿ. ನನ್ನ ಆತ್ಮಶಾಂತಿಗೆ ಏನು ಮಾಡಬೇಕೆಂಬುದನ್ನು ಈ ಪೆಟ್ಟಿಗೆಯಲ್ಲಿರುವ ಕಾಗದ ನೋಡಿ ಹಾಗೆ ಮಾಡಿ. ನಿಧಿ ದೊರಕಿದ ಮೇಲೆಯೇ ಈ ಪೆಟ್ಟಿಗೆ ತೆರೆಯಿರಿ" ಎಂದು ಹೇಳಿ ಪ್ರಾಣಬಿಟ್ಟನು.

ಆ ಮೇಲೆ ಊರಿನವರೆಲ್ಲಾ ಕೂಡಿ ಮೂರು ಮೈಲು ಉದ್ದಕ್ಕೆ ಕಾಲು ದಾರಿಯಲ್ಲಿ ಹತ್ತಡಿ ಆಳದ ವರೆಗೆ ಅಗೆದರು. ಎಲ್ಲಿಯೂ ಚಿನ್ನದ ಕೊಪ್ಪರಿಗೆ ಸಿಗಲಿಲ್ಲ. ಹಿರಿಯರು ಬೇಸರಪಟ್ಟು, ಪೆಟ್ಟಿಗೆಯನ್ನು ತೆರೆದು ಅದರೊಳಗಿನ ಕಾಗದ ಓದಿದರು. "ಚಿನ್ನ ಸಿಗಲಿಲ್ಲವೆಂದು ನಿರಾಶರಾಗದೆ, ನೀವು ಉದ್ದಕ್ಕೆ ತೋಡಿದ ಕಾಲುವೆಯನ್ನು ಗುಡ್ಡದ ಸರೋವರಕ್ಕೆ ಕೂಡಿಸಿರಿ. ಭೂಮಿಯಲ್ಲಿ ಚಿನ್ನದಂಥ ಬೆಳೆಯಾಗಿ ನಿಮ್ಮ ಕೊಪ್ಪರಿಗೆ ತುಂಬುತ್ತದೆ" ಎಂದಿತ್ತು, ಅದರಲ್ಲಿ.





# ಇದ್ದುದೂ ಹೋಯಿತು!

ಒಂದು ಹಳ್ಳಿಯಲ್ಲಿ ಶಿವನೇ ಅಂತ ವ್ಯಾಪಾರಮಾಡಿ ಕೊಂಡಿದ್ದವನಿಗೆ ನಗರದ ಮೋಹವು ಬಡಿಯಿತು. ಅವನು ಹಳ್ಳಿಯಲ್ಲಿದ್ದ ತನ್ನ ಆಸ್ತಿಪಾಸ್ತಿಗಳನ್ನೆಲ್ಲಾ ಮಾರಿ ತನ್ನ ಇಬ್ಬರು ಮಕ್ಕಳನ್ನು ಕರೆದುಕೊಂಡು ಪಟ್ಟಣಕ್ಕೆ ಹೋದನು.

ಅಲ್ಲಿ ಅತೀ ಉತ್ಸಾಹದಿಂದ ಕೈಯಲ್ಲಿದ್ದ ಹೆಚ್ಚಿನ ಹಣವನ್ನೆಲ್ಲಾ ವ್ಯಾಪಾರದ ಸರಕುಗಳಿಗೆ ಹಾಕಿ, ಉಳಿದ ಸ್ವಲ್ಪ ಹಣದಿಂದ ಒಂದು ಮೂಲೆಯಲ್ಲಿದ್ದ ಹಳೆಯ ಮನೆಯನ್ನು ಕೊಂಡುಕೊಂಡು ಅದರಲ್ಲಿ ವಾಸಕ್ಕೆ ಏರ್ಪಾಡು ಮಾಡಿಕೊಂಡನು.

ಆದರೆ ಪಟ್ಟಣದಲ್ಲಿ ವ್ಯಾಪಾರವು ಕೂಡಿಬರಲಿಲ್ಲ. ದಿನದಿಂದ ದಿನಕ್ಕೆ ನಷ್ಟವೇ ಉಂಟಾಗಿ ಅವನು ಹಾಕಿದ ಧನವೆಲ್ಲಾ ನಾಶವಾಗಿ ಆ ವ್ಯಾಪಾರಿ ಅದೇ ಚಿಂತೆಯಲ್ಲಿ ಸತ್ತೂ ಹೋದನು.

ಆ ಮೇಲೆ ವ್ಯಾಪಾರಿಯ ಮಗನು ತಮ್ಮನೊಂದಿಗೆ, "ತಮ್ಮಾ, ಈ ಹಳೇ ಕೊಂಪೆ ಮನೆ ನಮಗೆ ಕೂಡಿ ಬರುವಂಥಾದ್ದಲ್ಲ. ಇದನ್ನು ಮಾರಿ ಬಂದ ಹಣದಿಂದ ಬೇರೇನಾದರೂ ವ್ಯಾಪಾರ ಪ್ರಾರಂಭಿಸೋಣ. ನಮಗೆ ಅದೃಷ್ಟ ಕೂಡಿ ಬಂದರೂ ಬಂದೀತು." ಎಂದನು. "ಹೌದೌದು. ಒಳ್ಳೇ ಆಲೋಚನೆ. ಹಾಗೆಯೇ ಮಾಡೋಣ" ಎಂದ ತಮ್ಮ.

ಮಾರುವ ನಿಶ್ಚಯಮಾಡಿದ ಮೇಲೆ ಅಣ್ಣ ತಮ್ಮಂದಿರು, ಮನೆಯೊಳಗಿರುವ ಸಾಮಾನುಗಳನ್ನು ಎಣಿಸಿ, ಒಳಿತಾವುದು, ಕೆಟ್ಟುದಾವುದು ಎಂಬುದರ ತನಿಖೀ ನಡೆಸುತ್ತ, ಮೆಟ್ಟಿಲಿನ ಕೆಳಗಿದ್ದ ಒಂದು ಕೊಟಡಿಯ ತುಕ್ಕುಹಿಡಿದ ಬೀಗವನ್ನು ಮುರಿದು ಅದರೊಳಗೆ ಹೊಕ್ಕರು. ಅದರೊಳಗೆ ಗೆದ್ದಲು ಹಿಡಿದು ಮುರಿದ ಕಟ್ಟಿಗೆ ಸಾಮಾನುಗಳ ಹೊರತು ಬೇರೇನೂ ಇರಲಿಲ್ಲ.

"ಇಲ್ಲಿ ಉಪಯೋಗಕ್ಕೆ ಬರುವಂಥಾದ್ದು ಯಾವುದೂ ಇಲ್ಲ. ಇದನ್ನೆಲ್ಲ ತೆಗೆದು ಶುಭ್ರಮಾಡುವ ಕೆಲಸವೂ ನಮಗೆಬೇಡ. ಹೀಗೇ ಇರಲುಬಿಟ್ಟು ಮನೆ ಮಾರಿಬಿಡುವಾ" ಎಂದ ಅಣ್ಣ.

ಆಗ ಆ ಕೋಣೆಯಲ್ಲಿ ಒಂದು ಆಕೃತಿ ಪ್ರತ್ಯಕ್ಷ ವಾಯಿತು. ಅದು ಯಾವುದೋ ಭೂತವೆಂದು ಕೊಂಡು ಅಣ್ಣತಮ್ಮಂದಿರು ಹೆದರಿ ನಡುಗಿ ಸ್ತಬ್ಧ ರಾದರು. "ಏನಂದಿರಿ? ನೀವು ನಿಜವಾಗಿ ಈ ಮನೆಯನ್ನು ಇನ್ನಾರಿಗೋ ಮಾರುವಿರಾ?" ಎಂದು

ಎಂ. ಕೆ. ಈಶ್ವರರಾವ್

ಭೂತವು ಅವರನ್ನು ಕೇಳಿತು. ಅಣ್ಣನು ಸ್ವಲ್ಪ ಮಟ್ಟಿಗೆ ಧೈರ್ಯ ತಂದುಕೊಂಡು, "ಹೌದು ! ಹೌದು! ಈ ಹಾಳು ಕೊಂಪೆ ಮನೆ ನಮಗೆ ಕೂಡಿ ಬರಲಿಲ್ಲ. ಏನಾದರೂ ವ್ಯಾಪಾರಮಾಡಲು ನಮ್ಮ ಹತ್ತಿರ ಚಿಕ್ಕಾಸು ಕೂಡಾ ಇಲ್ಲ" ಎಂದನು. "ಹೌದು! ಈ ಮನೆ ಮಾರದೆ ಬೇರೆ ಗತಿಯೇ ನಮಗಿಲ್ಲ" ಎಂದ ತಮ್ಮನೂ.

"ಬೇಡ ಬೇಡ! ನೀವು ಈ ಮನೆಯನ್ನು ಮಾರಲೇ ಬಾರದು. ನಾನು ಈ ಕೋಣೆಯಲ್ಲಿ ಪ್ರಶಾಂತವಾಗಿ ತಪಸ್ಸು ಮಾಡಿಕೊಂಡಿರುತ್ತೇನೆ. ನೀವು ಈ ಮನೆಯನ್ನು ಯಾರಿಗಾದರೂ ಮಾರಿದರೆ ಅವರು ನನ್ನ ಪ್ರಶಾಂತತೆಯನ್ನು ಹಾಳು ಮಾಡಿಬಿಡಬಹುದು. ಅಥವಾ ಈ ಮನೆ ಪೂರಾ ನೆಲಮಟ್ಟಮಾಡಿ ಹೊಸ ಮನೆ ಕಟ್ಟಬಹುದು. ನಾನು ಬಂದು ತಿಂಗಳು ಸಹಾ ಆಗಿಲ್ಲ. ಮೂರು ವರ್ಷವಾದರೂ ಇಲ್ಲಿ ತಪಸ್ಸು ಮಾಡುತ್ತೇನೆ. ಅಷ್ಟರವರೆಗಾದರೂ ಇದನ್ನು ಮಾರಿ ಬಿಡಬೇಡಿರಪ್ಪಾ ! ನಿಮ್ಮ ಪುಣ್ಯ !" ಎಂದಿತು ಭೂತ.

"ನಿನ್ನ ಸೌಕರ್ಯ ನೋಡುತ್ತಾ ಇದ್ದರೆ ನಾವಿಬ್ಬರು ಬದುಕುವುದು ಹೇಗೇ?" ಎಂದು ಕೇಳಿದರು ಅಣ್ಣತಮ್ಮಂದಿರು.

"ನಿಮಗೆ ಬೇಕಾದ್ದು ಹಣತಾನೇ ? ನಾನು ನಿಮಗೆ ಹಣ ಕೊಡುತ್ತೇನೆ. ನಿಮ್ಮ ಇಷ್ಟಬಂದ ವ್ಯಾಪಾರ ಮಾಡಿಕೊಳ್ಳಿ" ಎಂದು ಭೂತವು ಅವರಿಗೆ ಒಂದು ಸಾವಿರ ನಾಣ್ಯಗಳ ಗಂಟುಕೊಟ್ಟು ಮಾಯವಾಯಿತು.

ಅಣ್ಣತಮ್ಮಂದಿರು ಆ ಕೋಣೆಗೆ ಬೀಗ ಹಾಕಿಟ್ಟರು. ತಮ್ಮನು ಸಂತೋಷದಿಂದ, "ಕಷ್ಟವಿಲ್ಲದೆ ಕೈತುಂಬಾ ಹಣ ಸಿಕ್ಕಿತಲ್ಲ. ಇದರಿಂದ ಏನು ವ್ಯಾಪಾರ ಮಾಡೋಣ?" ಎಂದು ಅಣ್ಣನನ್ನು ಕೇಳಿದ.

"ನಿನ್ನ ಬುದ್ಧಿ ಇಷ್ಟೇ ಏನು? ಕಾಮಧೇನುವಿನ ಹಾಗೆ ಭೂತವನ್ನು ಮನೆಯಲ್ಲಿಟ್ಟುಕೊಂಡು ವ್ಯಾಪಾರಕ್ಕೆ ತಲೆ ಹಾಕುವ ಕಷ್ಟ ಏತಕ್ಕೆ? ಯಾವಾಗಬೇಕೋ



ಆವಾಗ ಆ ಭೂತವನ್ನು ಕೇಳಿ ನಮಗೆ ಬೇಕಾದಷ್ಟು ಹಣ ಪಡೆಯಬಹುದು" ಎಂದ ಅಣ್ಣ.

ಮತ್ತೇನು ? ಅಣ್ಣತಮ್ಮಂದಿರು ತಿಂದೂ ಕುಡಿದೂ ವಿನೋದಿಸಿಯೂ ಜೂಜಾಡಿಯೂ ಭೂತದಿಂದ ಪಡೆದ ಹಣವನ್ನು ಒಂದೆರಡು ವಾರದೊಳಗೇ ತೀರಿಸಿದರು.

ಆ ಮೇಲೆ ಅವರು ಭೂತವಿರುವ ಕೊಟಡಿಯ ಬಾಗಿಲು ತೆರೆದು, ಭೂತವನ್ನು ಉದ್ದೇಶಿಸಿ, "ನೀನು ಕೊಟ್ಟ ಹಣದಿಂದ ಬಟ್ಟೆಗಳ ವ್ಯಾಪಾರ ಪ್ರಾರಂಭಿಸಿದೆವು. ಸರಕು ಪೂರಾ ಬೆಂಕಿಬಿದ್ದು ಸುಟ್ಟು ಹೋಯಿತು. ಈ ಮನೆ ನಮಗೆ ಕೂಡಿ ಬರುವುದಿಲ್ಲವೆಂದು ಮೊದಲೇ ಅಂದುಕೊಂಡಿದ್ದೆವು. ಇನ್ನು ಇದನ್ನು ಮಾರಲೇಬೇಕಾಗಿದೆ! ಈ ಸ್ಥಳವೇ ಸರಿಯಿಲ್ಲ." ಎಂದರು.

"ನಿಮ್ಮ ಅಜಾಗರೂಕತೆಯಿಂದ ಆದ ನಷ್ಟಕ್ಕೆ ಈ ಮನೆಯನ್ನು ದೂರುವುದು ಒಳ್ಳೇದಲ್ಲ. ಮತ್ತೆ

ಹಣ ಕೊಡುತ್ತೇನೆ. ಇನ್ನೊಂದು ವ್ಯಾಪಾರವೇನಾದರೂ ಪ್ರಾರಂಭಿಸಿರಿ" ಎಂದು ಹೇಳಿ ಭೂತವು ಆ ಅಣ್ಣ ತಮ್ಮಂದಿರಿಗೆ ಎರಡು ಸಾವಿರ ರೂಪಾಯಿಯ ಗಂಟುಕೊಟ್ಟಿತು,

ಈ ಸಾರಿ ಸಿಕ್ಕಿದ ಹಣವನ್ನು ಅವರು ಹತ್ತೇ ದಿನಗಳಲ್ಲಿ ಖರ್ಚು ಮಾಡಿಮುಗಿಸಿದರು. ಮತ್ತೆ ಭೂತದ ಕೊಟಡಿಗೆಹೋಗಿ, "ಈ ಕೊಂಪೆ ಹಾಳು ಕೊಂಪೆಯೇ ಸರಿ. ಮತ್ತೆ ನಷ್ಟವೇ ಬಂತು. ಒಂದು ವೇಳೆ ನನ್ನ ಹೆಸರಿನ ಮೇಲೆ ಮಾಡಿದ ವ್ಯಾಪಾರವಾದ್ದರಿಂದ ನಷ್ಟ ಬಂತೇನೋ ? ಈ ಸಾರಿ ನನ್ನ ತಮ್ಮನ ಹೆಸರಿನಲ್ಲೇ ವ್ಯಾಪಾರ ಮಾಡಿಸುತ್ತೇನೆ. ಅದನ್ನು ನೋಡೋಣ" ಎಂದು ಸುಳ್ಳು ಬೊಗಳಿ ಭೂತದಿಂದ ಮತ್ತೊಮ್ಮೆ ಹಣ ಎಳೆದುಕೊಂಡನು ಅಣ್ಣ. ಆ ಹಣಕೂಡಾ ಹತ್ತು ದಿನಗಳಲ್ಲಿ ಖರ್ಚಾಗಿ ಹೋಯಿತು.

"ಈ ಚಿಕ್ಕ ಚಿಕ್ಕ ಮೊತ್ತವು ಪ್ರಯೋಜನವಿಲ್ಲ. ಒಂದೇಸಾರಿ ಭೂತದ ಕೈಯಿಂದ ತಲಾ ಐವತ್ತು ಸಾವಿರ ಸೆಳೆದುಕೊಳ್ಳಬೇಕು" ಎಂದು ಅಣ್ಣನು ತಮ್ಮನೊಂದಿಗೆ ಹೇಳಿದನು. "ಹೌದು ಹೌದೆ"ಂದು ತಮ್ಮನೂ ದನಿಗೂಡಿಸಿದ.

ಅವರು ಮತ್ತೆ ಭೂತವಿರುವ ಕೊಟಡಿಯನ್ನು ಪ್ರವೇಶಿಸಿ, "ವ್ಯಾಪಾರವೇನೂ ಕೂಡಿಬರುವುದೇ ಇಲ್ಲ. ಹೊಲಗದ್ದೆಗಳನ್ನು ಕೊಂಡುಕೊಂಡು ವ್ಯವಸಾಯಮಾಡೋಣವೆಂದಿದ್ದೇವೆ. ಇಬ್ಬರಿಗೂ ಸೇರಿ ನೂರು ಸಾವಿರ ಕೊಟ್ಟುಬಿಡು.' ಎಂದರು.

ಭೂತವು ಸ್ವಲ್ಪ ಆಲೋಚಿಸಿ, "ಹೌದು ಹೌದು. ಪದೇ ಪದೇ ನೀವು ಬಂದು ನನ್ನ ತಪಸ್ಸು ಭಗ್ನ ಮಾಡುತ್ತಾ ಇದ್ದೀರಿ. ನೀವು ಹೇಳುವ ಹಾಗೆ ಇದು ಕೂಡಿಬರುವ ಜಾಗವೇ ಅಲ್ಲವೆಂಬುದು ನಿಜವೇ. ನಿಮಗೆ ಮೂರುಸಾರಿಯೂ ವ್ಯಾಪಾರದಲ್ಲಿ ಪೆಟ್ಟೇ ಆಯಿತು. ನಾನು ಪ್ರಶಾಂತವಾಗಿ ತಪಸ್ಸುಮಾಡಿ ಈ ಜನ್ಮದಿಂದ ಮುಕ್ತಿ ಪಡೆಯೋಣವೆಂದು ನೋಡಿದರೆ ಅದಕ್ಕೂ ಸಾಧ್ಯವಿಲ್ಲದಾಗಿದೆ. ಇದು ಒಳಿತುಮಾಡುವ ಕೊಂಪೆಯೇ ಅಲ್ಲ. ನಾನು ಬೇರೆ ಜಾಗ ನೋಡಿಕೊಳ್ಳುತ್ತೇನೆ. ನೀವು ಇದನ್ನು ಮಾರಿ ನಿಮ್ಮ ಇಷ್ಟದಂತೆ ಮಾಡಿ" ಎಂದು ಹೇಳಿ ಭೂತ ಅದೃಶ್ಯವಾಯಿತು.

ಹೀಗಾಗುವುದೆಂದು ಅಣ್ಣತಮ್ಮಂದಿರು ಊಹಿಸಿರಲಿಲ್ಲ. ಆದುದರಿಂದ ಅವರಿಗೆ ಮಂಕುಕವಿದ ಹಾಗಾಯಿತು.

ಆ ದಿನ ರಾತ್ರಿ ಭಾರೀ ಮಳೆಸುರಿಯಿತು. ಆ ಮನೆಯ ಮೇಲೆಯೇ ಸಿಡಿಲುಬಿತ್ತು. ಅಣ್ಣ ತಮ್ಮಂದಿರು ಜೀವ ಉಳಿಸಿಕೊಂಡು ಹೇಗೋ ಹೊರಗೆ ಓಡಿ ಬದುಕಿದರು. ಸಿಡಿಲಿನೇಟಿಗೆ ಆ ಹಳೇ ಮನೆ ನೆಲಮಟ್ಟವಾಗಿಹೋಯಿತು!





# ವಿಷಹರಣ

ಹಿಂದೆ ಮೋತೀಪುರವನ್ನು ಒಂದು ರಾಜವಂಶವು ಆಳಿಕೊಂಡಿದ್ದಿತು. ಆ ವಂಶದವರಲ್ಲಿ ವಿಚಿತ್ರವಾದೊಂದು ಆಚಾರವು ನಡೆದುಕೊಂಡು ಬಂದಿತ್ತು. ರಾಜನ ಆನಂತರ ರಾಜನ ಹಿರಿಯ ಮಗನೇ ಪಟ್ಟಕ್ಕೆ ಬರುವನಾದರೂ, ಯಾವ ಕಾರಣದಿಂದಾಗಲೀ, ದೇಹದಲ್ಲಿಯೋ ಮಾನಸಿಕವಾಗಿಯೋ ಏನಾದರೂ ನ್ಯೂನತೆಯಿದ್ದರೆ ಅವನಿಗೆ ರಾಜನಾಗುವ ಅರ್ಹತೆ ಇರುವುದಿಲ್ಲ, ಅವನ ತಮ್ಮನೋ, ತಮ್ಮನಿಲ್ಲದಿದ್ದರೆ ಬೇರೆ ಸಮೀಪದ ವಾರಸನೋ ರಾಜನಾಗುವನು. ಒಂದು ವೇಳೆ ಹಿರಿಯವನು ಸತ್ತು ಹೋದ ಪಕ್ಷದಲ್ಲಿ ರಾಜ್ಯದ ಒಂದು ವರ್ಷದ ಆದಾಯದಲ್ಲಿ ಅರ್ಧ ಭಾಗವನ್ನು ಆ ಮೇಲೆ ರಾಜನಾಗುವವನು ಅವನ ಅಧಿಕಾರವಿರುವವರೆಗೂ ದೇವಾಲಯಕ್ಕೆ ಕೊಡಬೇಕಾಗುತಿತ್ತು.

ಮೋತೀಪುರದ ವಿಕ್ರಮರಾಜನಿಗೆ ಶ್ರೀಮತಿ, ಸುಮತಿ ಎಂಬ ಇಬ್ಬರು ಹೆಂಡತಿಯರಿದ್ದರು. ಅವರಿಗೆ ಕ್ರಮವಾಗಿ ಕಮಲಾಕರ ಮತ್ತು ಕುಣಾಲ ಎಂಬ ಇಬ್ಬರು ಮಕ್ಕಳು. ಹಿರಿಯವನೂ ಹಿರಿಯವಳ ಮಗನೂ ಆದ ಕಮಲಾಕರನು ಹದಿನಾಲ್ಕು ವಯಸ್ಸಿನವನಾಗಿರುವಾಗ ರಾಜನು ಅವನನ್ನು ಯುವರಾಜನೆಂದು ಪ್ರಕಟಿಸಿದನು. ಆ ವಾರ್ತೆಯನ್ನು ಕೇಳಿ ಅಸೂಯಾಪರಳಾದ ಸುಮತಿ ತನ್ನೊಳಗೇ ಕುದಿಯತೊಡಗಿದಳು. ಹೇಗಾದರೂ ಮಾಡಿ ಕಮಲಾಕರನನ್ನು ರಾಜನಾಗಲು ಅನರ್ಹನನ್ನಾಗಿ ಮಾಡಿಬಿಟ್ಟರೆ ತನ್ನ ಮಗನೇ ರಾಜನಾಗುತ್ತಾನೆಂದು ಅವಳಿಗೆ ತೋರಿತು.

ಈ ಕೆಟ್ಟ ಯೋಚನೆಯನ್ನು ಮನಸ್ಸಿನಲ್ಲಿ ತುಂಬಿಕೊಂಡು ಅವಳು ತನ್ನ ತೌರು ಮನೆಗೆ ಹೋಗಿ, ತನ್ನ ವಿಶ್ವಾಸಕ್ಕೆ ಪಾತ್ರಳಾದ ಜಟಿಲೆ ಎಂಬ ತನ್ನ ಸೋದರತ್ತೆಯೊಂದಿಗೆ ತನ್ನ ಸಮಸ್ಯೆಯನ್ನು ಹೇಳಿದಳು. "ಅದಕ್ಕೇನು ಕಷ್ಟ 'ಕಮಲಾಕರನ ಕೈಯೋ ಕಾಲೋ ಮುರಿಯುವ ಹಾಗೆ ಮಾಡೇನು? ಎಂದಳು ಜಟಿಲೆ.

"ಅದೆಲ್ಲಾ ಸಾಧ್ಯವಾಗುವಂತಿಲ್ಲ.' ಅಂತಹ ಪ್ರಯತ್ನದಲ್ಲಿ ಅವನ ಪ್ರಾಣ ಗೀಣ ಹೋದರೆ ಖಜಾನೆಯ ಅರ್ಧಭಾಗ ದೇವಾದಾಯಕ್ಕೆ ಹೋಗುತ್ತದೆ. ಪ್ರಯತ್ನದಲ್ಲಿ ವಿಫಲತೆಯುಂಟಾದರೆ ನಮ್ಮ ಮೇಲೆಯೋ ತಿರುಗಿ ಹೊಡೆದೀತು. ನಮಗೆ ಸಹಾಯ

ಪಿ. ಸಿ. ಸರ್ಕಾರ್, ಇಂದ್ರಜಾಲಿಕರು

ಮಾಡಿದವರೇ ನಮಗೆ ದ್ರೋಹಮಾಡಿಯಾರು. ಯಾರನ್ನೂ ನಂಬುವಂತಿಲ್ಲ" ಎಂದಳು ಸುಮತಿ.

ಜಟಿಲೆ ಸ್ವಲ್ಪ ಹೊತ್ತು ಆಲೋಚಿಸಿ, ಯಾವುದೋ ಒಂದು ಸೀಸೆಯನ್ನು ತಂದು ಸುಮತಿಗೆ ಕೊಟ್ಟು, "ಇದರೊಳಗಿರುವ ದ್ರವದ ಒಂದು ಬೊಟ್ಟು ಮಾತ್ರ, ಕಮಲಾಕರನು ಕುಡಿಯುವ ಹಾಲಿನಲ್ಲಿ ದಿನಾ ಬೆರೆಸಿ ಕೊಟ್ಟುಬಿಡು. ಕ್ರಮವಾಗಿ ಅವನ ಮಾತು ನಿಂತು ಹೋಗುತ್ತದೆ. ಅದು ಒಂದು ಅಂಗವೈಕಲ್ಯವೇ ಆದುದರಿಂದ ಅವನು ಅನರ್ಹನಾಗಿ ನಿನ್ನ ಮಗನೇ ರಾಜನಾಗುತ್ತಾನೆ." ಎಂದಳು.

ಇದು ಒಳ್ಳೆಯ ಉಪಾಯವೆಂದುಕೊಂಡು ಸುಮತಿ ಮನೆಗೆ ಹಿಂದಿರುಗಿಬಂದು ರಾತ್ರಿಯಲ್ಲಿ ತನ್ನ ಮಗನಿಗೂ, ತನ್ನ ಸವತಿಯ ಮಗನಿಗೂ ಹಾಲು ಕೊಡುವಾಗ ಕಮಲಾಕರನ ಹಾಲಿನಲ್ಲಿ ಒಂದು ಬಿಂದು ವಿಷದ್ರವವನ್ನು ಬೆರೆಸಿ ಕೊಡಲು ತೊಡಗಿದಳು. ಅದರಿಂದ ಕ್ರಮವಾಗಿ ಕಮಲಾಕರನ ಕಂಠಸ್ವರವು ಗೊಗ್ಗರುಕಟ್ಟುತ್ತಾ ಬಂದಿತು. ಕಡೆಗೆ ಅವನ ಮಾತು ಪೂರ್ತಿ ನಿಂತೇ ಹೋಯಿತು. ಇಬ್ಬರು ರಾಣಿಯರೂ ಒಂದೇ ಭವನದಲ್ಲಿ ಬೇರೆ ಬೇರೆ ಕೋಣೆಗಳಲ್ಲಿದ್ದರೂ, ಎರಡು ಕುಟುಂಬಗಳಿಗೂ ಒಂದೇ ಪಾಕಶಾಲೆಯಿದ್ದಿತು. ಪಾಕಶಾಲೆಯ ಯಜಮಾನಿಕೆ ಸುಮತಿಯದೇ ಆದುದರಿಂದ ಅವಳಿಗೆ ವಿಷಕಾರ್ಯವು ಸುಗಮವೇ ಆಯಿತು.

ಹೀಗೆ ಬರುಬರುತ್ತ ರಾಜಕುಮಾರನ ಮಾತು ಬಿದ್ದು ಹೋದುದನ್ನು ನೋಡಿ ಮಂತ್ರಿ ಧೀಮಾನನಿಗೆ ಸಂದೇಹವಾಯಿತು. ಏನೋ ತಂತ್ರವು ನಡೆದಿರಬೇಕೆಂದುಕೊಂಡು, ಅದನ್ನು ಕಂಡುಹಿಡಿಯಲು ತನ್ನ ವಿಶ್ವಾಸದ ಗೂಢಚಾರಿಣಿಯನ್ನು ಸುಮತಿಯ ಸೇವೆಗೆ ನಿಯೋಜಿಸಿದನು. ಅದೇ ಸಮಯದಲ್ಲಿ ಅವನು ಕಳಿಂಗ ದೇಶದಿಂದ ರಘುನಾಥನೆಂಬ ವೈದ್ಯನನ್ನು ಕರೆಯಿಸಿ ರಾಜಕುಮಾರನಿಗೆ ಚಿಕಿತ್ಸೆ ಮಾಡಲು ಒಪ್ಪಿಸಿದನು.

ರಘುನಾಥ ವೈದ್ಯನು ಸೊಣಕಲನಾಗಿ, ಕಪ್ಪಗೆ, ಸ್ವಲ್ಪವೂ ಆಕರ್ಷಣೀಯ ವ್ಯಕ್ತಿತ್ವವಿಲ್ಲದವನಾಗಿದ್ದನು.



ಅಲ್ಲದೆ ಸಾಧಾರಣ ಜನರಿಗಿರುವ ಶಕ್ತಿ ಸಾಮರ್ಥ್ಯಗಳು ಕೂಡಾ ಅವನಿಗಿರುವಂತೆ ಕಾಣುತ್ತಿದ್ದಿಲ್ಲ. ದಿಗ್ಗಜಗಳಂತಹ ಆಸ್ಥಾನ ವೈದ್ಯರಿಂದ ಮಾಡಲಾಗದ ಚಿಕಿತ್ಸೆಯನ್ನು ಈ ರಘುನಾಥನು ಮಾಡುವನೆಂದು ರಾಜನಿಂದ ನಂಬಲಾಗದೆ, ಅವನನ್ನು ನಿರಾಕರಿಸಿದನು.

ಮಂತ್ರಿ ಧೀಮಾನನಿಗೆ ಏನು ಮಾಡುವುದೆಂದು ತಿಳಿಯಲಿಲ್ಲ. ಆ ಪರಿಸ್ಥಿತಿಯನ್ನು ತಿಳಿದು ಆಸ್ಥಾನದ ಐಂದ್ರಜಾಲಿಕನಾದ ಸೋಮನಾಥನು ಧೀಮಾನನಿಗೆ ಒಂದು ಉಪಾಯ ಹೇಳಿದನು. ಅದರಂತೆ ಧೀಮಾನ್ ರಘುನಾಥನನ್ನು ರಾಜನಬಳಿಗೆ ಕರೆದುಕೊಂಡು ಹೋಗಿ "ಮಹಾರಾಜರೆ, ಈ ರಘುನಾಥನು ವೈದ್ಯದಲ್ಲಿ ಅತೀತವಾದ ಪ್ರಜ್ಞೆಯುಳ್ಳವನು. ಇವನು ತನ ಔಷಧ ಪ್ರಭಾವದಿಂದ ಪ್ರಾಣವಿಲ್ಲದವುಗಳನ್ನು ಕೂಡ ಮಾತಾಡಿಸಬಲ್ಲನು. ಬೇಕಾದರೆ ಇವನ ಶಕ್ತಿಯನ್ನು ನೀವೇ ಪರೀಕ್ಷಿಸಬಹುದು" ಎಂದನು. "ಹಾಗಾದರೆ ಒಳ್ಳೆಯದು, ಪರೀಕ್ಷೆ ನಡೆಯಲಿ" ಎಂದ ರಾಜ. ಮಂತ್ರಿ ದೇವರ ಪೂಜೆಗೆ ಉಪಯೋಗಿಸುವ ಚಿಕ್ಕದೊಂದು ಘಂಟಾಮಣಿಯನ್ನು ತಂದು ರಾಜನಿಗೆ ತೋರಿಸಿ, ಅದನ್ನು ಆಡಿಸಿ ಶಬ್ದಬರಿಸಿ, ಅನಂತರ ಘಂಟಾಮಣಿಯ ನಾಲಗೆಯನ್ನು ತೆಗೆದು, ಆಡಿಸಿ ಅದು ಶಬ್ದ ಬರದಿರುವುದನ್ನೂ ತೋರಿಸಿದನು. ರಾಜನೂ ಅದನ್ನು ತೆಗೆದುಕೊಂಡು, ಅದರಲ್ಲಿ ಶಬ್ದ ಬರಿಸುವಂತಹುದೇನೂ ಇಲ್ಲವೆಂಬುದನ್ನು ಖಾತ್ರಿಗೊಳಿಸಿಕೊಂಡು ಮಂತ್ರಿಗೆ ಕೊಟ್ಟನು. ಮಂತ್ರಿ ಅದನ್ನು ರಘುನಾಥ ವೈದ್ಯನ ಕೈಗೆ ಕೊಟ್ಟು "ನಿಮ್ಮ ಮಂತ್ರೌಷಧಿಯ ಪ್ರಭಾವ ಇದರಲ್ಲಿ ತೋರಿಸಿರಿ" ಎಂದನು. ರಘುನಾಥನು ಆ ನಾಲಗೆ ಇಲ್ಲದ ಘಂಟಾಮಣಿಯ ಮೇಲೆ ತೀರ್ಥ ಚೆಲ್ಲಿ, ಮಂತ್ರ ಮಣ ಮಣಿಸಿ ಅದನ್ನು ಬಲಗೈಯಲ್ಲೆತ್ತಿಕೊಂಡು ಆಡಿಸಿದನು. ಗಂಟೆ ಮೊಳಗಿಸುವ ಕಿಣಿಕಿಣೀರವವು ಆಶ್ಚರ್ಯಕರವಾಗಿ ಕೇಳತೊಡಗಿತು. ಹಾಗೆ ಎರಡು ಮೂರು ಸಾರಿ ಮೊಳಗಿಸಿ ರಘುನಾಥನು ಘಂಟಾಮಣಿಯನ್ನು ಮಂತ್ರಿಗೆ ಕೊಟ್ಟನು. ಮಂತ್ರಿ ರಾಜನಿಗೆ ಕೊಟ್ಟನು. ರಾಜನು ಅದನ್ನು ಆಡಿಸಿ ನೋಡಿದಾಗ



ಅದೇನೂ ಶಬ್ದಿಸಲಿಲ್ಲ. "ಮಂತ್ರಿವರ್ಯಾ! ಈ ಅಪರ ಧನ್ವಂತರಿಯಿಂದ ಕಮಲಾಕರನಿಗೆ ತಕ್ಕುದಾದ ಚಿಕಿತ್ಸೆ ಮಾಡಿಸಿರಿ" ಎಂದನು ರಾಜ.

ಆ ಮೇಲೆ ವೈದ್ಯ ರಘುನಾಥನು ಕಮಲಾಕರನನ್ನು ಪರೀಕ್ಷಿಸಿ, "ಇವನಿಗೆ ಯಾರೋ ಬಹಳ ಉಪಾಯವಾಗಿ ವಿಷಪ್ರಯೋಗ ಮಾಡಿದ್ದಾರೆ. ಇನ್ನೂ ಮಾಡುತ್ತಿದ್ದಾರೆ" ಎಂದನು. ಮಂತ್ರಿ ತನ್ನ ಗೂಢಚಾರಿಣಿಯನ್ನು ಎಚ್ಚರಿಸಿದನು. ಆ ಪರಿಚಾರಿಕೆ, ಕಣ್ಣಿನ ಮೇಲೆ ಕಣ್ಣಿಟ್ಟು, ಸುಮತಿ ಹಾಲಿನಲ್ಲಿ ಏನೋ ಒಂದು ಸೀಸೆಯ ದ್ರವದ ಬಿಂದು ಬೆರೆಸುವುದನ್ನು ಗಮನಿಸಿ ಅದನ್ನು ಮಂತ್ರಿಗೆ ಹೇಳಿದಳು. ಮಂತ್ರಿ ಧೀಮಾನ್ ಆ ದ್ರವದ ಸೀಸೆಯನ್ನು ಆ ಪರಿಚಾರಿಕೆಯಿಂದ ರಹಸ್ಯವಾಗಿ ತರಿಸಿ, ಅದರ ಸ್ಥಾನದಲ್ಲಿ ಅಂತಹುದೇ ಇನ್ನೊಂದು ಸೀಸೆಯನ್ನು ಇಡಿಸಿದನು.

ರಘುನಾಥ ವೈದ್ಯನ ಚಿಕಿತ್ಸೆ ಪ್ರಾರಂಭವಾಯಿತು. ಕ್ರಮವಾಗಿ ಕಮಲಾಕರನಿಗೆ ಧ್ವನಿ ಹೊರಡಿಸುವ ಶಕ್ತಿಯೂ, ಮಾತಾಡುವ ಶಕ್ತಿಯೂ ಬರತೊಡಗಿತು. ತಾನು ವಿಷ ಬೆರೆಸುತ್ತಲೇ ಇದ್ದರೂ ಕಮಲಾಕರನ ಬಿದ್ದು ಹೋದ ಮಾತು ಪುನಃ ಸರಿಯಾಗುತ್ತಾ ಬರುವುದನ್ನು ನೋಡಿ ಸುಮತಿ ತಲೆ ಕೆರೆದುಕೊಳ್ಳುತ್ತಿದ್ದಳು.

ಕಮಲಾಕರನು ಸರಿಯಾಗಿ ಮೊದಲಿನಂತೆ ಮಾತಾಡತೊಡಗಿದನು. ರಘುನಾಥನ ಚಿಕಿತ್ಸೆ ಮುಗಿಯಿತು. ಧೀಮಾನ್ ಸುಮತಿಯ ದ್ರೋಹವನ್ನು ರಾಜನಿಗೆ ಹೇಳಿ, ಅವಳು ಉಪಯೋಗಿಸಿದ ವಿಷದ್ರವದ ಸೀಸೆಯನ್ನು ರಾಜನ ಕೈಗೆ ಕೊಟ್ಟನು. ರಾಜನು ಆ ಸೀಸೆಯನ್ನು ತೆಗೆದುಕೊಂಡು ಸುಮತಿಯ ಬಳಿಗೆ ಹೋಗಿ, ಅವಳ ಕೋಣೆಯಲ್ಲಿರುವ ಮತ್ತೊಂದು ಸೀಸೆಯನ್ನು ತೆಗೆದು, "ಇದು ವಿಷ ದ್ರವವಲ್ಲ. ನಿಜವಾದ ವಿಷ ನನ್ನ ಕೈಯಲ್ಲಿದೆ. ನೀನು ವಿಷ ಅಂದುಕೊಂಡು ಕಮಲಾಕರನಿಗೆ ಹಾಲಿನಲ್ಲಿ ನೀರಿನ ಬಿಂದು ಬೆರೆಸಿ ಕೊಡುವೆ ಗೊತ್ತಾ?" ಎಂದನು. ಸುಮತಿ ಸುಮ್ಮನಿದ್ದಳು.

ರಾಜನು ತನ್ನ ಕೈಯಲ್ಲಿದ್ದ ಸೀಸೆಯ ಮುಚ್ಚಳವನ್ನು ತೆಗೆದು "ಇದರಲ್ಲಿರುವ ಒಂದು ಬಿಂದುವನ್ನು ನಿನ್ನ ಮಗನಿಗೆ ಕುಡಿಸು" ಎಂದನು.

ಸುಮತಿಯ ಮುಖ ಕಪ್ಪಿಟ್ಟಿತು. ತನ್ನ ಪರಿಚಾರಿಕೆಯಾದವಳೇ ತನ್ನ ರಹಸ್ಯವನ್ನು ಬಯಲು ಮಾಡಿದಳೆಂದು ಗೊತ್ತಾದ ಮೇಲೆ ಸುಮತಿ ತಾನು ನಿರ್ದೋಷಿ ಎಂದು ನಟಿಸುವ ಪ್ರಯತ್ನ ಮಾಡಲಿಲ್ಲ. ರಾಜನು ಅವಳನ್ನು ಸೆರೆಮನೆಯಲ್ಲಿಡಿಸಿದನು.

ನಾಲಿಗೆ ಇಲ್ಲದ ಘಂಟಾಮಣಿ ಹೇಗೆ ಶಬ್ದಿಸಿತೆಂದರೆ, ಸೋಮನಾಥನು ಹೇಳಿದಂತೆ ರಘುನಾಥನು ಅಂತಹುದೇ ಇನ್ನೊಂದು ಚಿಕ್ಕ ಘಂಟಾಮಣಿಯನ್ನು ಅಂಗಿಯ ಕೈಯೊಳಗೆ ಕೈಯಲ್ಲಿ ಕಟ್ಟಿಕೊಂಡಿದ್ದನು.





# ಚದುರಂಗದ ಆಟ

ಪೂರ್ವಕಾಲದಲ್ಲಿ ಒಬ್ಬರು ಮಹಾ ಸ್ವಾಮಿಗಳಿದ್ದರು. ಅವರು ವೈರಾಗ್ಯದ ಸ್ವಾಮಿಗಳು ಮಾತ್ರವಲ್ಲ, ದೊಡ್ಡ ಪಂಡಿತರೆಂದೂ ಹೆಸರು ಪಡೆದಿದ್ದರು. ಆದುದರಿಂದ ಅವರಿಗೆ ದೇಶದೊಳಗೆಲ್ಲಾ ಶಿಷ್ಯರ ಗುಂಪು ಇದ್ದಿತು. ಅವರ ದಿವ್ಯ ಬೋಧನೆಗಳನ್ನು ಇನ್ನೂ ಇನ್ನೂ ಕೇಳಬೇಕೆನಿಸುತಿತ್ತು. ಅವರನ್ನು ಸ್ವಾಗತಿಸಲು ಎಲ್ಲಾ ಊರವರೂ ಹಾತೊರೆದು ಕೊಂಡಿರುವರು.

ಆ ಸ್ವಾಮಿಯವರು ವರ್ಷದಲ್ಲಿ ಆರು ತಿಂಗಳು ಮಾತ್ರವೇ ತನ್ನ ಆಶ್ರಮದಲ್ಲಿದ್ದು, ಶಿಷ್ಯರಿಗೆ ವೇದ, ವೇದಾಂಗಗಳ ರಹಸ್ಯಗಳನ್ನು ಬಿಡಿಸಿ ಹೇಳುತ್ತ, ಉಳಿದ ಆರು ತಿಂಗಳು ದೇಶಾಟನೆ ಮಾಡುವರು. ಸಂಚಾರದ ಕಾಲದಲ್ಲಿ ತಮ್ಮ ಶಿಷ್ಯರೂ ಭಕ್ತರೂ ಭಕ್ತಿಯಿಂದ ಸಮರ್ಪಿಸುವ ತೃಣವೋ ಪಣವೋ ಸ್ವೀಕರಿಸಿ ತುಂಬು ಮನದಿಂದ ಅವರನ್ನು ಹರಸುವರು. ದೊರಕಿದ ಹಣದಿಂದ ತಮ್ಮ ಹುಟ್ಟೂರಲ್ಲಿ ಅನೇಕ ಧರ್ಮಸಂಸ್ಥೆಗಳನ್ನು ನಡೆಸುವರು.

ಹೀಗೆ ಒಂದು ಸಾರಿ ಆ ಸ್ವಾಮಿಯವರು ದೇಶಾಟನೆ ಮಾಡುತ್ತಾ, ಒಂದು ಹಳ್ಳಿ ಪ್ರಾಂತದಲ್ಲಿದ್ದ ಶಿಷ್ಯರಿಗೆ ಮಾತುಕೊಟ್ಟ ಹಾಗೆ ನಾಲ್ಕು ದಿನ ಆ ಊರಿನಲ್ಲಿದ್ದು ಬೋಧನೆ ಕೊಡಬೇಕಾಯಿತು. ಆ ಊರಿಗೆ ಸ್ವಾಮಿಗಳು ಬರುವಾಗ ಊರ ಜನರೆಲ್ಲಾ, ಮಂಗಳ ವಾದ್ಯ, ಕೊಂಬುಕಹಳೆ ತುತೂರಿ ಧ್ವನಿಗಳಿಂದ ಸ್ವಾಗತಿಸಿದ್ದರು. ವಿಷ್ಣು ದೇವಾಲಯದ ಆವರಣದಲ್ಲಿದ್ದ ಮಂಟಪದಲ್ಲಿ ಅವರ ವಾಸಕ್ಕೆ ಏರ್ಪಾಡು ಮಾಡಿಕೊಟ್ಟಿದ್ದರು. ಅವರ ಉಪನ್ಯಾಸ ಸಭೆ ನಡೆಸಲು ಎದುರಿನ ಪಟಾಂಗಣವು ವಿಸ್ತಾರವಾಗಿ ಪ್ರಶಸ್ತವಾಗಿದ್ದಿತು.

ಸ್ವಾಮಿಯವರು ಅಲ್ಲಿಗೆ ಬಂದ ಸಮಯ ಮೊದಲುಗೊಂಡು, ಅಲ್ಲಿಯ ಗೌಜಿಗದ್ದಲಗಳಿಗೆ ವಿರಾಮವಿರಲಿಲ್ಲ. ಹರಿಕಥೆ, ಭಜನೆ, ಪುರಾಣಪಠನ, ಮೊದಲಾದುವುಗಳಿಂದ ಕಾಲವು ಸದ್ವಿನಿಯೋಗವಾಗುತ್ತಿದ್ದಿತು. ಗ್ರಾಮಸ್ಥರು ಆನಂದದಿಂದ ತುಂಬಿ ಧನ್ಯರಾದೆವೆಂದುಕೊಂಡರು. ಸ್ವಾಮಿಗಳ ಬಾಯಿಯಿಂದ ಹೊರಟ ನೀತಿಯ ಮುತ್ತುಗಳು ಜನರ ಮನಸ್ಸಿನಲ್ಲಿ ಬೆಳಗಿ, ಅದರ ಮಹತ್ವವನ್ನು ಬಾಯಿಯಿಂದಲೂ ಹೇಳಿಕೊಳ್ಳುತ್ತಿದ್ದರು. ನಾಲ್ಕು ದಿನಗಳು ನಾಲ್ಕು ನಿಮಿಷಗಳಂತೆ ಕಳೆದುವು.

೩೫ ವರ್ಷಗಳ ಹಿಂದಿನ ಚಂದಮಾಮ ಕಥೆ



ಇನ್ನು ಮುಂದಿನ ಊರಿಗೆ ಹೋಗಲು ಏರ್ಪಾಡು ಮಾಡಬೇಕಾಗಿತ್ತು. ಇಲ್ಲಿನವರನ್ನು ಸಂತೋಷಪಡಿಸಿದ ಹಾಗೆ ಅಲ್ಲಿನವರನ್ನೂ ಸಂತೋಷ ಪಡಿಸಬೇಕು. ಅದು ಹೇಗೆ ಏನೆಂಬುದನ್ನು ಆಲೋಚಿಸುತ್ತ, ಮಂಟಪದ ಹೊರಭಾಗದಲ್ಲಿ ಆಚೆಗೂ ಈಚೆಗೂ ಕಲಾಡಿಸಿಕೊಂಡಿದ್ದರು ಸ್ವಾಮಿಯವರು. ಅವರ ಇದಿರಿನಲ್ಲಿ ಮೈದಾನವೂ ಅಲ್ಲಲ್ಲಿ ಕಾಡುಗಳೂ ಸುಂದರವಾಗಿ ಕಾಣುತ್ತಿದ್ದುವು.

ಆ ಕಾಡಿನ ಒಂದು ಮರದ ಹತ್ತಿರವೇ ಸ್ವಾಮಿಯವರ ದೃಷ್ಟಿ ನಿಂತಿತು. ಆ ಮರದ ಬುಡದಲ್ಲಿ ಕುಳಿತಿದ್ದ ಒಬ್ಬ ಮನುಷ್ಯನ ವರ್ತನೆಗಳು ಸ್ವಾಮಿಯವರಿಗೆ ಆಶ್ಚರ್ಯವನ್ನುಂಟುಮಾಡಿತು. ಅವನ ಚೇಷ್ಟೆಗಳು ಯಾರೊಡನೆಯೋ ಮಾತುಕತೆಯಾಡುವಂತಿದ್ದರೂ, ಇದಿರಾಳಿ ಮಾತ್ರ ಕಾಣುತ್ತಿರಲಿಲ್ಲ. ಅಂತೆಯೇ ಸ್ವಾಮಿಗಳಿಗೆ ಅವನ ಪ್ರವರ್ತನೆಯ ಗುಟ್ಟು ಅರ್ಥವಾಗಲಿಲ್ಲ.

ಹಾಗಾದರೆ ಅವನು ಹುಚ್ಚನಾಗಿರಬಹುದೆ? ಇಲ್ಲ. ಹಾಗೂ ಕಾಣುವುದಿಲ್ಲ. ಅವನ ದುಸ್ತುಗಳನ್ನು ನೋಡುವಾಗ ಸಂಪನ್ನನಾದ ಗೃಹಸ್ಥನಂತೆಯೇ ಕಾಣುತ್ತಾನೆ. ಅಂಥವನು ಹೀಗಿರುವುದೆಂದರೆ, ಏನಾಯಿತೋ ? ಅವನ ದುಸ್ತು ನೋಡಿ ಬುದ್ಧಿಯ ಮಟ್ಟವನ್ನು ಅಳೆಯುವುದೂ ಸರಿಯಲ್ಲವಷ್ಟೆ ?

ಅವನ ವಿಚಿತ್ರ ವರ್ತನೆಯ ಕಾರಣವನ್ನು ತಿಳಿಯಲೇಬೇಕೆಂಬ ಕುತೂಹಲವನ್ನು ತಾಳಲಾರದೆ ಸ್ವಾಮಿಯವರು ಪಾದಚಾರಿಗಳಾಗಿ ಅವನ ಬಳಿಗೆ ಹೋದರು.

ಊರೆಲ್ಲಾ ಹೊಗಳುವ ಮಹಾಸ್ವಾಮಿಯವರು ತನ್ನ ಬಳಿಯಲ್ಲಿ ಬಂದು ನಿಂತಿರುವುದನ್ನು ಅವನು ಲಕ್ಷಿಸಲೇ ಇಲ್ಲ. ತನ್ನೊಳಗೆ ತಾನೇ ಮಾತಾಡಿಕೊಳ್ಳುತ್ತ, ಕೈ ಕಾಲುಗಳನ್ನು ವಿಚಿತ್ರವಾಗಿ ಆಡಿಸುತ್ತ, ಖಾಲಿಕೈಯಿಂದ ಏನನ್ನೋ ಹಾಕುತ್ತ, ದೂಡುತ್ತ ಬಾಚುತ್ತ, ಮೇಲೆ ನೋಡಿ ನಗುತ್ತ ಇರುವುದನ್ನು ನೋಡಿ, "ಏನಪ್ಪಾ ಇದೆಲ್ಲಾ ? ನೀನು ಇಲ್ಲಿ ಯಾರೊಂದಿಗೆ ಮಾತಾಡುತ್ತಾ ಇರುವಿ ?" ಎಂದು ಪ್ರಶ್ನಿಸಿದರು ಸ್ವಾಮಿಯವರು.

"ಮಾತಾಡುವುದಲ್ಲ ಇದು, ಆಟ. ಆಟವಾಡುತ್ತಿದ್ದೇನೆ. ನಾನು ಯಾರೊಂದಿಗೆ ಆಡುತ್ತಿದ್ದೇನೋ ಅವರು ಬಹುಶಃ ನಿಮಗೆ ಕಾಣಿಸುವುದಿಲ್ಲವೆಂದು ಕಾಣುತ್ತದೆ. ಕಾಣಿಸುತ್ತಿದ್ದರೆ ನೀವು ಹೀಗೆ ಕೇಳುತ್ತಿದ್ದಿರಾ ?" ಎಂದು ಆ ವಿಚಿತ್ರ ಮನುಷ್ಯನು ಹೇಳಿದನು.

ಸ್ವಾಮಿಯವರು ವಿಸ್ಮಯಗೊಂಡರು. "ಇವನು ಹುಚ್ಚನೇನೋ?" ಎಂಬ ಸಂಶಯ ದೃಢವಾಯಿತು. "ಅಪ್ಪಾ, ನೀನು ಆಡುವ ಆಟ ಎಂತಹುದು ? ನಿನ್ನ ಜತೆಯಲ್ಲಿ ಆಡುವವರು ಯಾರು ? ಎಂಥವರು ? ಆ ರಹಸ್ಯವನ್ನಿಷ್ಟು ನನಗೆ ಹೇಳಬಲ್ಲೆಯಾ ?" ಎಂದು ಅವನನ್ನು ಕೇಳಿದರು.

"ಅದೇ ನೋಡಿ ರಹಸ್ಯವೆಂದರೆ! ಆದರೂ ಲೋಕಕಲ್ಯಾಣಕ್ಕಾಗಿ ಅವತರಿಸಿದ ಮಹಾನುಭಾವರು ನೀವು. ನಿಮ್ಮಂಥವರೊಂದಿಗೆ ಹೇಳದಿದ್ದರೆ ಹೇಗೆ? ನಿಜ ಹೇಳುತ್ತೇನೆ. ನಾನು ಆಡುವುದು ಚದುರಂಗ ದಾಟ. ನನ್ನ ಜತೆಯಲ್ಲಿ ಆಡುವ ಎರಡನೆಯವನು ಕೇವಲ ಆ ದೇವನೇ!" ಎಂದು ವಿಷ್ಣು ದೇವಾಲಯು ವನ್ನು ತೋರಿಸಿಯೇ ಹೇಳಿದನು ಆ ವಿಚಿತ್ರ ಮನುಷ್ಯ.

ಸ್ವಾಮಿಯವರಿಗೆ ಅವನ ಮಾತು ಕೇಳಿ ನಗು ಬಂದಿತು. "ಇವನು ನಿಜಕ್ಕೂ ಹುಚ್ಚನೇ. ಸಂದೇಹ ವೇನಿಲ್ಲ. ಆದರೆ ಇವನ ಹುಚ್ಚಿನಲ್ಲಿಯೂ ಒಂದು ಬುದ್ಧಿವಂತಿಕೆ ಅಡಗಿರುವ ಹಾಗಿದೆ. ಇದೂ ಒಂದು ಭಕ್ತಿ ಮಾರ್ಗವಾಗಿರಬೇಕು. ಭಗವಂತನು ಇವನನ್ನೇ ತನ ಲೀಲಾ ರಂಗದ ಒಂದು ಪಾತ್ರವಾಗಿ ಮಾಡಿ ಕೊಂಡಿರಬೇಕು." ಎಂದುಕೊಳ್ಳುತ್ತ, "ಹಾಗಾದರೆ ಈಗ ಯಾರು ಗೆದ್ದದ್ದು?" ಎಂದು ಕೇಳಿದರು.

"ತಡೀರಿ, ತಡೀರಿ. ಹೇಳುತ್ತೇನೆ. ಆಟ ಇನ್ನೂ ಮುಗಿದಿಲ್ಲ." ಎಂದು ಅವನು ಮರದ ಮೇಲೆ ನೋಡುತ್ತ, "ದೇವಾ, ನೀನು ಹೇಳಿದ ಆಟ ಕಟ್ಟಾಯ್ತು ಎಂಬ ಮಾತು ಕೇಳಿದೆ. ಈ ದಿನ ಗೆದ್ದ ವನು ನೀನೇ! ನಾನು ಸೋತೆ! ನೀನು ನನ್ನನ್ನು ಸೋಲಿಸಿಬಿಟ್ಟೆ! ಇಕೋ ಪಂದ್ಯದ ಹಣ." ಎಂದು ಹೇಳುತ್ತಾ ಜೇಬಿನೊಳಗೆ ಕೈ ತೂರಿಸಿದನು.

ಅವನ ಪ್ರವರ್ತನೆಯಿಂದ ಸ್ವಾಮಿಯವರು ಮತ್ತಿಷ್ಟು ಬೆರಗಾದರು. "ಮತ್ತೆ ಸೋತವನು ಗೆದ್ದವನಿಗೆ ಕೊಡಬೇಕಾದ ಪಂದ್ಯದ ಹಣವನ್ನು ಯಾರಿಗೆ ಕೊಡುತ್ತೀ? ಹೇಗೆ ಕೊಡುತ್ತೀ?" ಎಂದರು.

"ಹೌದು ಸ್ವಾಮಿ, ಕೊಡಬೇಕು ಕೊಡಬೇಕು. ಈ ಆಟಕ್ಕೆ ಎರಡು ಮೊಹರೀಗಳು ಪಂದ್ಯವೆಂದು ಮಾತಾಡಿಕೊಂಡಿದ್ದೆವು." ಎಂದನು.

"ಹಾಗಾದರೆ ಈಗ ನೀನು ಸೋತೆಯಲ್ಲಾ? ಮತ್ತೆ ಜೇಬಿಗೆ ಕೈ ತೂರಿಸಿ ತೊಳಸುತ್ತ ದೇವನಿಗೆ



ನೀನು ಎರಡು ಮೊಹರಿಕೊಡುವ ಹಾಗೆ ನಟಿಸಿದರೆ ಅವನು ಸುಮ್ಮನಿರುತ್ತಾನೆಯೆ?" ಎಂದು ಸ್ವಾಮಿ ಯವರು ಕುತೂಹಲದಿಂದ ನಗುತ್ತಾ ಕೇಳಿದರು.

ಕೂಡಲೇ ಅವನು ಜೇಬಿನಿಂದ ಎರಡು ಮೊಹರಿ ಗಳನ್ನು ತೆಗೆದು, "ಸ್ವಾಮೀ, ದೇವನು ಯಾವಾಗಲೂ ಸ್ವಯಂ ಬಂದು ಪಂದ್ಯದ ಹಣ ತೆಗೆದು ಕೊಳ್ಳುವು ದಿಲ್ಲ. ಆ ಸಮಯಕ್ಕೆ ಯಾವ ಭಾಗವತೋತ್ತಮನ ರೂಪದಲ್ಲಿಯೋ ಬಂದು ಪ್ರತ್ಯಕ್ಷನಾಗುವನು. ಅವರಿಗೆ ಕೊಟ್ಟರೆ ದೇವನಿಗೆ ಸೇರಿಬಿಡುತ್ತದೆ ಆ ಧನ. ಈ ದಿನ ವಿಷ್ಣು ದೇವಾಲಯದಿಂದ ನನ್ನ ಅದೃಷ್ಟ ವಶಾತ್ ತಾವು ಬಂದಿದ್ದೀರಿ. ತಾವೇ ತೆಗೆದುಕೊಂಡರೆ ಆ ದೇವನಿಗೇ ಸೇರಿಬಿಡುತ್ತದೆ." ಎನ್ನುತ್ತ ಜಗಜಗನೆ ಹೊಳೆಯುವ ಎರಡು ಬಂಗಾರದ ಮೊಹರಿಗಳನ್ನು ಸ್ವಾಮಿಯವರ ಕೈಗೆ ಹಾಕಿದನು.

ಆ ನಿಮಿಷದಲ್ಲಿ ಸ್ವಾಮಿಯವರಿಗೆ ಏನೂ ತೋರದೆ ಹೋಯಿತು. ಅವನು ಅವರಿಗೊಂದು ನಮಸ್ಕಾರ

ಹಾಕಿ ಹೊರಟೇಹೋದನು. ಸ್ವಾಮಿಯವರು ಆ ಮೊಹರಿಗಳನ್ನು ನೋಡುತ್ತಾ ತಮ್ಮ ಮಂಟಪಕ್ಕೆ ಹಿಂದಿರುಗಿ, ಹುಚ್ಚರಲ್ಲಿ ಕೂಡಾ ಎಂತಹ ಭಕ್ತರಿದ್ದಾರೋ ಎಂಬ ಮಹಾ ವಿಷಯವನ್ನು ತನ್ನ ಶಿಷ್ಯರಿಗೆ ಬಣ್ಣಿಸಿ ಹೇಳಿದರು.

ಮುಂದೆ ಎರಡು ತಿಂಗಳು ಕಳೆಯಿತು. ಸ್ವಾಮಿಯವರು ಸ್ವಲ್ಪ ಮಟ್ಟಿಗೆ ಮುಂದಿನ ದೇಶಗಳಲ್ಲಿ ಸಂಚರಿಸಿ, ಅಲ್ಲಿ ಸಿಕ್ಕಿದ ಕಾಣಿಕೆಗಳನ್ನು ಮೂಟೆಕಟ್ಟಿಸಿಕೊಂಡು ಹಿಂದಿರುಗಿ ಬರುತ್ತಾ, ಮತ್ತೆ ಇದೇ ಗ್ರಾಮಕ್ಕೆ ಬಂದು, ಅದೇ ವಿಷ್ಣು ದೇವಾಲಯದ ಮಂಟಪದಲ್ಲಿ ತಂಗಿದರು

ಆ ಗ್ರಾಮದಲ್ಲಿ ಇಳಿಯುತ್ತಲೇ ಸ್ವಾಮಿಯವರಿಗೆ ಹಿಂದಿನ ಆ ವಿಚಿತ್ರ ಮನುಷ್ಯನ ನೆನಪು ಬಂದಿತು. ಮಂಟಪದ ಹೊರಗೆ ಕಾಡಿನ ಕಡೆಗೆ ನೋಡಿದರು. ಆ ಹುಚ್ಚು ಮನುಷ್ಯನು ಹಿಂದಿನಂತೆಯೇ ಆ ಮರದ ಬುಡದಲ್ಲಿ ಕುಳಿತಿರುವುದನ್ನು ನೋಡಿದರು. ಕೂಡಲೇ ಕುತೂಹಲದಿಂದ ಸ್ವಾಮಿಯವರು ಅವನ ಬಳಿಗೆ ಹೋಗಿ, "ಏನಪ್ಪಾ? ಚದುರಂಗದಾಟ ಚೆನ್ನಾಗಿ ಸಾಗುತ್ತದೆಯೆ? ಈ ದಿನ ಗೆದ್ದವರು ಯಾರು?" ಎಂದು ಕೇಳಿದರು.

ಆಡುತ್ತಾ ಇದ್ದ ಅವನು ಫಕ್ಕನೆ ಮರದ ಮೇಲಕ್ಕೆ ನೋಡಿ, "ದೇವಾ! ನಿನ್ನಾಟ ಕಟ್ಟು!" ಎಂದು ಗಟ್ಟಿಯಾಗಿ ಕೂಗಿ ಗಲಗಲನೆ ನಕ್ಕನು. "ಏನೋ? ನಗು ಜೋರಾಗಿದೆಯಲ್ಲ? ಈ ದಿನ ನೀನೇ ಗೆದ್ದೆಯಾ?" ಎಂದರು ಸ್ವಾಮಿಯವರು.

"ಗೆದ್ದೆ, ಅಯ್ಯಾ ಈ ಸಾರಿ ನಾನೇ ಗೆದ್ದೆ. ಅದೃಷ್ಟಕ್ಕೆ ಸರಿಯಾಗಿ ಈ ಸಾರಿ ಒಡ್ಡಿದ ಪಂದ್ಯವೂ ದೊಡ್ಡದೇ. ನೂರು ಮೊಹರಿಗಳು!" ಎಂದು ಹೇಳಿ ಮತ್ತೆ ದೊಡ್ಡದಾಗಿ ನಗತೊಡಗಿದನು.

"ಹಾಗಾದರೆ ದೇವನು ಆ ಹಣವನ್ನು ನಿನಗೆ ಹೇಗೆ ಕೊಡುತ್ತಾನಪ್ಪಾ?" ಎಂದು ಸ್ವಾಮಿಯವರು ಕೇಳಿದರು ಮನಸ್ಸಿನೊಳಗೇ ನಗುತ್ತ.

"ನಿಮ್ಮ ರೂಪದಲ್ಲೇ! ಈ ದಿನ ಅದೃಷ್ಟವಶಾತ್ ತಾವೇ ಬಂದು ಸಾಕ್ಷಾತ್ಕರಿಸಿದಿರಲ್ಲಾ! ತೆಗೆಯಿರಿ ನೂರು ಮೊಹರಿ!" ಎಂದನು ಅವನು.

ಸ್ವಾಮಿಯವರು ಪಿಳಿ ಪಿಳಿ ಅವನ ಮೋರೆಯನ್ನೇ ನೋಡಿದರು. "ದೇವನು, ನನಗೆ ಕೊಡಬೇಕಾದ್ದನ್ನು ಕೊಟ್ಟುಬಿಡಿ ಸ್ವಾಮಿಾ! ಆ ದಿನ ದೇವನ ರೂಪದಲ್ಲಿ ತೆಗೊಂಡಿರಲ್ಲಾ! ಕೊಡದಿದ್ದರೆ ನಾನು ಬಿಡುವವನಲ್ಲ!" ಎನ್ನುತ್ತಾ ಅವನು ಪೊದರಿನಲ್ಲಿ ಅಡಗಿಸಿಟ್ಟಿದ್ದ ದೊಣ್ಣೆಯನ್ನು ಎತ್ತಿಕೊಂಡನು.

ಸ್ವಾಮಿಯವರು ತಮ್ಮ ಸಂಪಾದನೆಯ ಗಂಟಿನಿಂದ ನೂರು ಮೊಹರಿಗಳನ್ನು ಅವನಿಗೆ ದಂಡ ಸಮರ್ಪಿಸಲೇ ಬೇಕಾಯಿ.





# ದೇವೀಭಾಗವತ

ತನ್ನ ಪ್ರೇಮದ ಪತ್ನಿಯೂ ಅಕ್ಕರೆಯ ಮಗುವೂ ತನ್ನನ್ನು ಅಗಲಿ ಹೋದ ಮೇಲೆ ಶಂತನು ರಾಜನು ತಾಳಲಾಗದಷ್ಟು ವಿಯೋಗ ದುಃಖಕ್ಕೆ ಒಳಗಾದನು. ತನ್ನ ದುರ್ವಿಧಿಯನ್ನು ನಿಂದಿಸಿಕೊಳ್ಳುತ್ತ ಹೇಗೋ ರಾಜ್ಯಪಾಲನೆ ಮಾಡುತ್ತಿದ್ದನು. ಒಂದು ದಿನ ಅವನು ಬೇಟೆಯಾಡಲು ಕಾಡಿಗೆಹೋಗಿ ತುಂಬಾ ದಣಿದನು. ವಿಶ್ರಾಂತಿ ಪಡೆಯಲು ಗಂಗಾತೀರಕ್ಕೆ ಹೋಗಿ ಗಂಗೆಯನ್ನು ನೋಡಿ ಬಹಳ ಆಶ್ಚರ್ಯಪಟ್ಟನು. ಗಂಗಾನದಿ ಪೂರ್ತಿ ಬತ್ತಿ ಒಣಗಿ ಸಣ್ಣಗಾಗಿ ಹೋಗಿತ್ತು. ಇದಕ್ಕೇನಾಯಿತೆಂದು ಯೋಚಿಸುತ್ತ ಹಾಗೆಯೇ ಕಣ್ಣು ಹರಿಸಿದನು. ಸ್ವಲ್ಪದೂರದಲ್ಲಿ ಒಬ್ಬ ಹುಡುಗನು ತನ್ನ ಬಿಲ್ಲು ವಿದ್ಯೆಯ ಪ್ರಾವೀಣ್ಯತೆಯನ್ನು ಪ್ರದರ್ಶಿಸುತ್ತಿದ್ದನು. ಅವನು ಗಂಗಾನದಿಯ ಪ್ರವಾಹಕ್ಕೆ ಅಡ್ಡವಾಗಿ ಬಾಣಗಳ ಪರಂಪರೆಯನ್ನೇ ಪ್ರಯೋಗಿಸಿ ಪ್ರವಾಹವನ್ನು ಬಂಧಿಸಿಬಿಟ್ಟಿದ್ದನು ಹುಡುಗನು ಆಕರ್ಷಕನಾಗಿ ತೋರಿದನು. ಹಾಗೆ ಅವನನ್ನು ನೋಡುತ್ತಿದ್ದಂತೆ ಶಂತನುವಿನ ಮನಸ್ಸಿನಲ್ಲಿ ಅವನು ತನ್ನ ಮಗನಾಗಿದ್ದರೆ ಒಳ್ಳೆಯದಿತ್ತೆನಿಸಿತು. ಅವನು ಮೆಲ್ಲನೆ ಆ ಹುಡುಗನ ಹತ್ತಿರ ಹೋಗಿ, "ಕಂದಾ, ನಿನ್ನ ತಂದೆ ಯಾರು ? ತಾಯಿ ಯಾರು ? ನಿನ್ನ ಹೆಸರೇನು ? ಯಾವ ಊರಪ್ಪಾ ನಿನ್ನದು ? " ಎಂದು ಪ್ರಶ್ನೆಗಳ ಮೇಲೆ ಪ್ರಶ್ನೆ ಕೇಳಿದನು.

ಆದರೆ ಆ ಹುಡುಗನು ಶಂತನುವಿನ ಪ್ರಶ್ನೆಗಳಿಗೆ ತಿರುಗಿ ಕೂಡಾ ನೋಡದೆ, ಬಾಣ ಪ್ರಯೋಗದಲ್ಲಿಯೇ ಮಗ್ನನಾಗಿಬಿಟ್ಟಿದ್ದನು. ಬಾಣ ಬಿಡುತ್ತ ಬಿಡುತ್ತ ಎಲ್ಲಿಗೋ ಕಾಣದೆ ಹೋಗಿಬಿಟ್ಟನು. ಆಗ ಶಂತನು ತನ್ನನ್ನು ಅಗಲಿಹೋದ ಗಂಗಾದೇವಿಯನ್ನು ನೆನೆಸಿದನು. ಆಕ್ಷಣವೇ ಗಂಗಾದೇವಿ ಹಿಂದಿನ ರೂಪದಲ್ಲಿಯೇ ಅವನಿದಿರು ಪ್ರತ್ಯಕ್ಷಳಾಗಿ ನಿಂತಳು.

"ಇಲ್ಲಿ ಇದೀಗ ಒಬ್ಬ ಹುಡುಗ ಬಾಣದೊಂದಿಗೆ ಆಡುತ್ತ ಎತ್ತೋ ಹೊರಟುಹೋದ. ಅವನು ಯಾರು, ಎತ್ತ ಹೋದನೆಂಬುದು ನಿನಗೇನಾದರೂ ಗೊತ್ತೇ ? ಅವನನ್ನು ಇನ್ನೊಮ್ಮೆ ತೋರಿಸುವೆಯಾ ?" ಎಂದು ಕೇಳಿದನು ಶಂತನು.

೭. ಕೌರವ ಪಾಂಡವರ ವೃತ್ತಾಂತ



ಗಂಗೆ ನಗಾಡುತ್ತ, "ಅವನು ಎಂಟನೇವಸು. ನನ್ನ ಹೊಟ್ಟೆಯಲ್ಲಿ ಹುಟ್ಟಿದ ನಿನ್ನ ಮಗನೇ. ಇದೋ ತಂದು ತೋರಿಸುತ್ತೇನೆ. ಇನ್ನು ನೀನೇ ಅವನನ್ನು ಸ್ವೀಕರಿಸಿ ಆದರಿಸಬೇಕು." ಎಂದು ಅತ್ತನೋಡಿ, "ಕಂದಾ !" ಎಂದು ಕರೆದಳು. ಕೂಡಲೇ ಆ ಹುಡುಗ ಅಲ್ಲಿಗೆ ಬಂದನು. "ಇವನು ವಸಿಷ್ಠನ ಹತ್ತಿರ ವೇದಗಳನ್ನು ಕಲಿತನು. ಪರಶುರಾಮನ ಹತ್ತಿರ ಶಿಷ್ಯನಾಗಿದ್ದನು. ಇನ್ನು ಮೇಲೆ ಇವನೇ ನಿನ್ನ ಕುಲವನ್ನು ಉದ್ಧರಿಸುತ್ತಾನೆ" ಎಂದು ಹೇಳಿ ಗಂಗಾದೇವಿ ಅದೃಶ್ಯಳಾದಳು.

ಶಂತನು ತನ ಮಗನನ್ನು ಆಲಿಂಗಿಸಿಕೊಂಡು, ತನ್ನ ರಥದ ಮೇಲೆ ಕುಳ್ಳಿರಿಸಿ ರಾಜಧಾನಿಗೆ ಕರೆದುಕೊಂಡು ಬಂದು, ಮಂತ್ರಿ ಪುರೋಹಿತಾದಿಗಳಿಗೆ ಆವನಾರೆಂಬುದನ್ನು ತಿಳಿಸಿದನು. ಎಲ್ಲರಿಗೂ ಸಂತೋಷವಾಯಿತು. ಎಲ್ಲರ ಅನುಮತಿಯ ಮೇರೆಗೆ ಶಂತನು ರಾಜನು ತನ್ನ ಮಗ ಗಾಂಗೇಯನಿಗೆ ವೈಭವದಿಂದ ಯುವರಾಜ ಪಟ್ಟಾಭಿಷೇಕ ಮಾಡಿದನು. ಅನಂತರ ನಾಲ್ಕು ವರ್ಷಗಳು ಕಳೆದುವು. ತರುವಾಯ ಬಂದುದಿನ ಶಂತನು ಬೇಟೆಯಾಡುತ್ತ, ಕಾಳಿಂದೀನದಿಯ ತೀರಕ್ಕೆ ಹೋಗಿ. ಒಂದು ಮರದ ನೆರಳಿನಲ್ಲಿ ದಣಿವಾರಿಸಿಕೊಳ್ಳುತ್ತಿದ್ದನು. ಆಗ ಅತ್ಯಾನಂದಕರವಾದ ಸುವಾಸನೆ ಬೀರುವಗಾಳಿ ಅವನನ್ನು ಆಕರ್ಷಿಸ ತೊಡಗಿತು.

ಶಂತನು ಆಶ್ಚರ್ಯ ಕುತೂಹಲಗಳಿಂದ ಗಾಳಿ ಬೀಸಿ ಬರುವ ದಿಕ್ಕನ್ನು ಹಿಡಿದು ಅರಣ್ಯದಲ್ಲಿ ತಿರುಗತೊಡಗಿದನು. ಸ್ವಲ್ಪ ಹೊತ್ತಿಗೆ ಅವನ ಇದಿರಿನಲ್ಲಿ ಅಪ್ಸರೆಯಂತಹ ಯುವತಿಯೊಬ್ಬಳು ಕಂಡುಬಂದಳು. ನಿಸ್ಸಂದೇಹವಾಗಿಯೂ ಅವಳ ಶರೀರದಿಂದಲೇ ಆ ಸುವಾಸನೆ ಹೊರಡುತ್ತಿರುವುದೆಂದು ತಿಳಿಯಿತು. ಅವಳು ದೇವಕಾಂತೆಯೋ, ಕಿನ್ನರಿಯೋ, ನಾಗಕನ್ಯೆಯೋ ಇರಬೇಕೇ ಹೊರತು, ಮಾನವಿಯಲ್ಲವೆಂದು ತೋರಿತು ಶಂತನುವಿಗೆ.

ಅವನು ಅವಳ ಸಮೀಪ ಹೋಗಿ, "ನೀನು ಯಾರು? ನಿನ್ನ ತಂದೆ ಯಾರು? ಈ ಅರಣ್ಯದಲ್ಲಿ ಹೀಗೆ ಒಬ್ಬಳೇ ಏಕೆ ತಿರುಗುತ್ತಿರುವಿ? ನಿನ್ನ ಗಂಡ ಯಾರು?" ಎಂದು ಕೇಳಿದನು. ಅಷ್ಟಕ್ಕೆ ಬಿಡದೆ. ಅವಳನ್ನು ನೋಡಿದ ಕೂಡಲೇ ತನಗೆ ಅವಳ ಮೇಲೆ ಮೋಹವಾಗಿದೆಯೆಂದೂ ತಾನು ಇಂತಹವನೆಂದೂ ಸಹ ಹೇಳಿಬಿಟ್ಟನು.

ಅದನ್ನೆಲ್ಲ ಕೇಳಿ ಅವಳು ಕಿರು ನಗುಸೂಸುತ್ತ. "ನಾನು ಕನ್ಯೆಯಾಗಿಯೇ ಇದ್ದೇನೆ. ನನ್ನ ತಂದೆಯನ್ನು ದಾಶರಾಜ ಎನ್ನುತ್ತಾರೆ. ದೋಣಿ ನಡೆಸಿಕೊಂಡಿರಲು ನನಗೆ ಹೇಳಿ, ತಾನೂ ಈಗಲೇ ಬರುವುದಾಗಿ ಹೇಳಿದ್ದಾರೆ. ಅದೋ, ಅಲ್ಲಿ ಕಾಣುವುದೇ ನಮ್ಮ ಮನೆ. ಅಲ್ಲಿಯೇ ಇದ್ದಾರೆ ತಂದೆ" ಎಂದಳು.

"ಕುರುವಂಶದ ರಾಜನಾದ ನಾನು ಒಬ್ಬಂಟಿಗನಾಗಿರುವವನು. ನಿನ್ನಂಥ ಸುಕುಮಾರಿಯಾದವಳು

ಹೀಗೆಲ್ಲಾ ಕಷ್ಟಪಡಬಾರದು. ನನ್ನನ್ನು ಮದುವೆಯಾಗಿ ಸಮಸ್ತ ಸುಖಗಳನ್ನೂ ಅನುಭವಿಸು. ನನ್ನ ಹೆಂಡತಿ ನನ್ನನ್ನು ತ್ಯಜಿಸಿ ಹೋಗಿ ಬಹಳ ಕಾಲವಾಯಿತು. ಅವಳು ನನಗೆ ಏನೇನೋ ಆಶೆಗಳನ್ನು ತೋರಿಸಿ ಹೋಗಿಬಿಟ್ಟಳು. ಅಂದಿನಿಂದ ನಾನು ಬೇರೆಯವಳನ್ನು ನೆನೆದವನಲ್ಲ. ಈಗ ನಿನ್ನನ್ನು ನೋಡಿದ ಕೂಡಲೇ ನಿನ್ನಲ್ಲಿ ಸಿಕ್ಕಿಕೊಂಡೆ. ನನ್ನ ಮಾತು ಅಲ್ಲಗಳೆಯಬೇಡ. ನನ್ನನ್ನು ಮತ್ತೆ ಸಂಸಾರಿಯಾಗಿಸು" ಎಂದನು ಶಂತನು.

ಅವನ ಮಾತುಗಳನ್ನು ಕೇಳಿ ಅವಳು ನಾಚಿಕೆಯಿಂದ ಮುಖ ತಗ್ಗಿಸಿಕೊಂಡು, ನಿಮಗೆ ನನ್ನ ಮೇಲೆ ಉಂಟಾದ ಮೋಹವು ನನಗೂ ನಿಮ್ಮ ಮೇಲೆ ಇಲ್ಲವೆಂದು ತಿಳಿಯಬೇಡಿ. ಆದರೆ ಸ್ತ್ರೀಯರು ಸ್ವತಂತ್ರಿಸಿ ನಡೆಯುವುದು ಧರ್ಮವಲ್ಲವಷ್ಟೆ? ಸ್ತ್ರೀಯರಿಗೆ ಹಿರಿಯರು ಮದುವೆಮಾಡಬೇಕೇ ಹೊರತು, ತಾವೇ ತಮ್ಮಿಷ್ಟದಂತೆ ಯಾರನ್ನೋ ಮದುವೆಮಾಡಿಕೊಂಡು ಬಿಟ್ಟರೆ ಹಿರಿಯರಿಗೆ ಅವಮಾನವಲ್ಲವೆ? ಆದುದರಿಂದ ನೀವು ಹೋಗಿ ನನ್ನ ತಂದೆಯೊಡನೆ ನಿಮ್ಮ ಸಂಗತಿಯನ್ನು ಹೇಳಿ ಅವರ ಅನುಮತಿ ಪಡೆದು ಆ ಮೇಲೆ ನನ್ನನ್ನು ಮದುವೆಯಾಗಿರಿ." ಎಂದಳು.

ಅವಳು ಸರಿಯಾದ ಮಾತನ್ನೇ ಹೇಳಿದಳೆಂದು ತಿಳಿದು ಶಂತನು ಅವಳ ತಂದೆಯನ್ನು ಕೇಳಲು ನಿಶ್ಚಯಿಸಿ ಅವಳ ಮನೆಯ ಕಡೆಗೆ ಹೊರಟನು.

ದಾಶರಾಜನು ಶಂತನುವನ್ನು ದೂರದಿಂದಲೇ ನೋಡಿ, ವಿನಯ ವಿಧೇಯತೆಗಳಿಂದ ಕೈ ಜೋಡಿಸಿಕೊಂಡು ಇದಿರಾಗಿ ಬರುತ್ತ, "ತಮ್ಮ ದಾಸ ನಾನು. ದಯಮಾಡಬೇಕು. ತಾವು ಹೀಗೆ ಪಾದ ಬೆಳೆಸುವುದು ನಮ್ಮ ಅದೃಷ್ಟ. ನನ್ನಿಂದ ಏನಾಗಬೇಕೋ ಅಪ್ಪಣೆಯಾಗಲಿ" ಎಂದನು. "ನಾನೊಂದು ಮುಖ್ಯವಾದ ಕೋರಿಕೆಯನ್ನು ಕೇಳಲು ಬಂದಿದ್ದೇನೆ. ನಿನಗೆ ಆಕ್ಷೇ



ಪಣೆ ಇಲ್ಲದಿದ್ದರೆ ನಾನು ನಿನ್ನ ಮಗಳನ್ನು ಮದುವೆ ಮಾಡಿಕೊಳ್ಳಬೇಕೆಂದಿದ್ದೇನೆ. ಏನು ಹೇಳುವೆ?" ಎಂದು ಕೇಳಿದನು ಶಂತನು.

ಆ ಮಾತು ಕೇಳಿ ದಾಶರಾಜನು ಅತ್ಯಾನಂದಪಟ್ಟು "ಮಹಾರಾಜರೇ, ನನ್ನ ಮಗಳನ್ನು ನೀವು ಮದುವೆಯಾಗಿ ನನ್ನ ವಂಶವನ್ನು ಎತ್ತರಿಸುವಿರೆಂದರೆ ಅದಕ್ಕಿಂತ ಹೆಚ್ಚು ನನಗೇನು ಬೇಕಾಗಿದೆ? ಆದರೂ ನನ್ನದೊಂದು ಕೋರಿಕೆ ಬಿನ್ನವಿಸುತ್ತೇನೆ. ನನ ಮಗಳಲ್ಲಿ ಹುಟ್ಟುವ ಮಗನೇ ನಿಮ್ಮ ಅನಂತರ ಪಟ್ಟಕ್ಕೆ ಬರುವವನಾಗಬೇಕು. ಇದಕ್ಕೇನೂ ಆಕ್ಷೇಪಣೆ ಹೇಳಬಾರದು" ಎಂದನು.

ಅವನ ಮಾತು ಕೇಳಿ ಶಂತನುವಿಗೆ ತನ್ನ ಮಗ ಗಾಂಗೇಯನ ಜ್ಞಾಪಕಬಂದು ನೋವಾಯಿತು. ಆದರಿಂದ ಅವನು ದಾಶರಾಜನ ಮಾತಿಗೆ ಏನೂ ಪ್ರತ್ಯುತ್ತರ ಕೊಡದೆ, ಹಿಂದಿರುಗಿ ಸೀದಾ ಮನೆಗೆ ಬಂದುಬಿಟ್ಟನು. ಆದರೆ ಅವನ ಮನಸ್ಸು ಪೂರ್ತಿ



ಆ ದಾಶಕನ್ಯೆಯ ಮೇಲೆಯೇ ಲಯಿಸಿ ಹೋಗಿತ್ತು. ಅವನು ಆ ದಿನ ಊಟವನ್ನೇ ಮಾಡಲಿಲ್ಲ.

ಆ ಸ್ಥಿತಿಯಲ್ಲಿರುವ ತಂದೆಯನ್ನು ನೋಡಿ ಗಾಂಗೇಯನು, "ಅಪ್ಪಾ, ಇದೇನು? ಇಷ್ಟೊಂದು ಚಿಂತೆಗೆ ಕಾರಣವೇನೆಂದು ನನ್ನೊಡನೆ ಹೇಳಬಾರದೆ? ಬಲಿಷ್ಠನಾದ ಶತ್ರು ಯಾವನಾದರೂ, ಏನಾದರೂ ಹೇಳಿದನೇ? . ಆಗಬಾರದ್ದೇನಾದರೂ ಆಯಿತೆ? ನಾನಿರುವಾಗ ಹೀಗೆ ಕೊರಗಿಕೊಂಡಿರುವ ಅಗತ್ಯ ವೇನಿದೆ? ನಿಮ್ಮ ಇಷ್ಟವೇನಿದ್ದರೂ ಅದನ್ನು ತೀರಿಸುವ ಭಾರ ನನ್ನದು" ಎಂದನು.

ಮಗನ ಮಾತನ್ನು ಕೇಳಿ ಶಂತನು ಲಜ್ಜಾಮಿಶ್ರಿತ ಚಿಂತೆಯಿಂದ, "ಕಂದಾ, ನನಗೆ ನೀನೊಬ್ಬನೇ ಮಗ ನಾಗಿರುವುದು ಚಿಂತೆಯಲ್ಲದೆ ಮತ್ತೇನು ಹೇಳು. ಒಬ್ಬ ಮಗನು ಮಗನಲ್ಲ, ಒಂದು ಕಣ್ಣು ಕಣ್ಣಲ್ಲ ಎನ್ನುತ್ತಾರೆ. ಹೇಗೋ ದೈವಿಕವಾಗಿ ಇರುವ ಒಬ್ಬ ಮಗನೂ ಹೋಗಿಬಿಟ್ಟರೆ ತಂದೆಯ ಗತಿ ಏನಾಗ ಬೇಕು?" ಎಂದನು. ಅದನ್ನು ಕೇಳಿ ಗಾಂಗೇಯನು ಮತ್ತೇನೂ ಕೇಳದೆ, ಮಂತ್ರಿಗಳನ್ನು ಕೇಳಿ ನಿಜ ಸಂಗತಿಯನ್ನು ತಿಳಿದುಕೊಂಡನು. ಕೂಡಲೇ ಮಂತ್ರಿಗಳನ್ನು ತನ್ನೊಂದಿಗೆ ಕರೆದು ಕೊಂಡು ದಾಶರಾಜನ ಬಳಿಗೆ ಹೋಗಿ. "ಏನಯ್ಯಾ, ನನ್ನ ತಂದೆಯೊಂದಿಗೆ ನಿನ್ನ ಮಗಳ ಮದುವೆಯನ್ನು ಮಾಡಲು ನೀನು ವಿಧಿಸುವ ನಿಬಂಧನೆಗೆ ಯಾವ ಆತಂಕವೂ ಬರುವುದಿಲ್ಲ. ನನ್ನ ತಂದೆಯೊಂದಿಗೆ ನಿನ್ನ ಮಗಳ ಮದುವೆಯನ್ನು ನೆರವೇರಿಸಿಬಿಡು. ನಾನು ಅವಳನ್ನು ತಾಯಿಯಾಗಿ ಭಕ್ತಿಯಿಂದ ನೋಡಿಕೊಳ್ಳುತ್ತೇನೆ. ಇದು ಸತ್ಯ." ಎಂದನು.

ಅದಕ್ಕೆ ದಾಶರಾಜನು "ನನ್ನ ಮಗಳನ್ನು ನೀನೇ ಮದುವೆಯಾಗುವುದು ಒಳ್ಳೆಯದು. ಹಿರಿಯನಾಗಿ ನೀನು ಇರುವಾಗ, ಅವಳ ಮಗನು ರಾಜನಾಗುವುದು ಯಥಾವಿಧಿಯಾಗಿಯೇ ಬರುತ್ತದಷ್ಟೇ?" ಎಂದನು.

"ನಾನು ಅವಳನ್ನು ತಾಯಿಯಾಗಿ ಭಾವಿಸಿದ ಮೇಲೆ ಅವಳು ತಾಯಿಯೇ. ಅವಳ ಮಗನೇ ಪಟ್ಟಕ್ಕೆ ಬರುತ್ತಾನೆ. ಇದರಲ್ಲೇನೂ ಸಂದೇಹಬೇಡ" ಎಂದ ಗಾಂಗೇಯ.

"ಅಯ್ಯಾ, ನೀನು ರಾಜ್ಯವು ಬೇಡವೆಂದರೂ ನಿನ್ನ ಮಗನು ನನ್ನ ಮೊಮ್ಮಗನಿಗೆ ರಾಜ್ಯವನ್ನು ಬಿಡುವನೆಂದು ಹೇಗೆ ನಂಬಲಿ?" ಎಂದು ದಾಶ ರಾಜನು ಕೇಳಿದನು.

"ನಾನು ಮದುವೆಯನ್ನೇ ಮಾಡಿಕೊಳ್ಳಲಾರೆ. ಅಂದ ಮೇಲೆ ನನಗೆ ಮಗನು ಹುಟ್ಟುವುದೆಲ್ಲಿ ಬಂತು? ಇದು ನನ್ನ ಪ್ರತಿಜ್ಞೆ. ಇನ್ನು ಯಾವ ಸಂದೇಹವನ್ನೂ ಇಟ್ಟುಕೊಳ್ಳದೆ ನಿನ್ನ ಮಗಳನ್ನು ನನಗೆ ತಾಯಿಯಾಗಿ ಕೊಟ್ಟುಬಿಡು" ಎಂದನು ಗಾಂಗೆಯ.

ಇದಕ್ಕೆ ದಾಶರಾಜನು ಒಪ್ಪಿದನು. ಆ ಮೇಲೆ ಸತ್ಯವತೀ ಶಂತನುಗಳ ವಿವಾಹವು ನಡೆಯಿತು. ಆ

ಸಮಯದಲ್ಲಿ ತಾನು ಎಂದಿಗೂ ಪಟ್ಟಾಭಿಷೇಕವನ್ನೂ ವಿವಾಹವನ್ನೂ ಮಾಡಿಕೊಳ್ಳಲಾರೆನೆಂದು ಗಾಂಗೇಯನು ಪ್ರತಿಜ್ಞೆ ಮಾಡಿದುದರಿಂದ ಅವನಿಗೆ ಭೀಷ್ಮನೆಂಬ ಸಾರ್ಥಕನಾಮಬಂದಿತು.

ಮುಂದೆ ಕಾಲಕ್ರಮದಲ್ಲಿ ಸತ್ಯವತಿ ಇಬ್ಬರು ಗಂಡು ಮಕ್ಕಳಿಗೆ ತಾಯಿಯಾದಳು. ಹಿರಿಯವನು ಚಿತ್ರಾಂಗದ, ಕಿರಿಯವನು ವಿಚಿತ್ರವೀರ್ಯ. ಆದರೆ ದುರದೃಷ್ಟವಶಾತ್ ಇಬ್ಬರೂ ಮಕ್ಕಳನ್ನು ಪಡೆಯದೆ ಚಿಕ್ಕಪ್ರಾಯದಲ್ಲಿಯೇ ಅಕಾಲ ಮರಣಕ್ಕೆ ತುತ್ತಾದರು.

ಆಗ ವಿಚಿತ್ರವೀರ್ಯನ ಪತ್ನಿಯರಲ್ಲಿ ಹಿರಿಯವಳಾದ ಅಂಬಿಕೆ ತನ ಅತ್ತೆ ಸತ್ಯವತಿಯ ಆಜ್ಞೆಯ ಮೇರೆಗೆ ವ್ಯಾಸನಿಂದ ಒಬ್ಬ ಮಗನನ್ನು ಪಡೆದಳು. ಧೃತರಾಷ್ಟ್ರನೆಂಬ ಆ ಮಗನು ಹುಟ್ಟುಗುರುಡನಾಗಿದ್ದನು. ಅಂತಹವನು ರಾಜನಾಗಿರಲು ಉಪಯೋಗವಿಲ್ಲವೆಂದುಕೊಂಡು ಸತ್ಯವತಿ ತನ್ನ ಎರಡನೇ ಸೊಸೆಯಾದ ಅಂಬಾಲಿಕೆಯನ್ನು ವ್ಯಾಸನ ಸೇವೆಗೆ ಕಳುಹಿಸಿದಳು. ಅವಳಿಗೆ ಹುಟ್ಟಿದ ಮಗನು ಪಾಂಡುರೋಗಿಯಾಗಿದ್ದು ಪಾಂಡುರಾಜನೆನಿಸಿದನು. ಈ ವಿಧವಾಗಿ ಎರಡು ಸಾರಿಯ ಪ್ರಯತ್ನಗಳೂ ತೃಪ್ತಿಕರವಾಗಿಲ್ಲದೆ ಹೋದುದರಿಂದ ಸತ್ಯವತಿ ಅಂಬಿಕೆಯನ್ನು ಒತ್ತಾಯಿಸಿ ಮತ್ತೊಮ್ಮೆ ವ್ಯಾಸನ ಬಳಿಗೆ ಕಳುಹಿಸಿದಳು. ಆದರೆ ಅಂಬಿಕೆಗೆ ಅದು ಇಷ್ಟವಿಲ್ಲದುದರಿಂದ, ಅವಳು ತನ ದಾಸಿಯನ್ನು ವ್ಯಾಸನ ಬಳಿಗೆ ಕಳುಹಿಸಿದಳು. ಆದರಿಂದ ಆ ದಾಸಿಯ ಹೊಟ್ಟೆಯಲ್ಲಿ ಹುಟ್ಟಿದವನು ವಿದುರ.

ಭೀಷ್ಮನು ಪಾಂಡುರಾಜನನ್ನೇ ರಾಜನನ್ನಾಗಿ ಮಾಡಿದನು. ಪಾಂಡುರಾಜನು ವಿದುರನನ್ನು ಮಂತ್ರಿಯಾಗಿ ಇಟ್ಟುಕೊಂಡು ರಾಜ್ಯಭಾರವನ್ನು ನೋಡಿಕೊಳ್ಳಲು ತೊಡಗಿದನು. ಧೃತರಾಷ್ಟ್ರನು ಗಾಂಧಾರಿಯನ್ನೂ ಮತ್ತೊಬ್ಬಳು ವೈಶ್ಯ ಸ್ತ್ರೀಯನ್ನೂ ಮದುವೆ ಮಾಡಿಕೊಂಡನು. ಗಾಂಧಾರಿಗೆ ನೂರು ಮಂದಿ ಕುಮಾರರೂ, ವೈಶ್ಯ ಸ್ತ್ರೀಗೆ ಒಬ್ಬ ಮಗನೂ ಹುಟ್ಟಿದರು. ಪಾಂಡುರಾಜನು ಕುಂತಿ ಮತ್ತು ಮಾದ್ರಿ ಎಂಬ ಕುಮಾರಿಯರನ್ನು ಮದುವೆ ಮಾಡಿ





ಕೊಂಡನು. ಕುಂತಿಗೆ ಮೂರು ಮಂದಿ ಗಂಡು ಮಕ್ಕಳೂ, ಮಾದ್ರಿಗೆ ಇಬ್ಬರು ಕುಮಾರರೂ ಹುಟ್ಟಿದರು. ಇವರು ಐವರು ಕ್ರಮವಾಗಿ ಯುಧಿಷ್ಠಿರ, ಭೀಮ, ಅರ್ಜುನ, ನಕುಲ, ಸಹದೇವ ಎಂಬವರು ಪಾಂಡವರೆನಿಸಿದರು.

ಕುಂತಿ ಮದುವೆಯಾಗುವುದಕ್ಕೆ ಮೊದಲೇ ಸೂರ್ಯನ ಅನುಗ್ರಹದಿಂದ ಒಂದು ಗಂಡು ಮಗುವನ್ನು ಹೆತ್ತು ಯಾರಿಗೂ ತಿಳಿಯದಂತೆ ನದಿಯ ಪ್ರವಾಹದಲ್ಲಿ ಬಿಟ್ಟು ಬಿಟ್ಟಿದ್ದಳು. ಆ ಮಗನು ಒಬ್ಬ ಸೂತನಿಗೆ ಸಿಕ್ಕಿ, ಕರ್ಣನೆಂಬ ಹೆಸರಿನಲ್ಲಿ ಅಲ್ಲಿಯೇ ಬೆಳೆದನು.

ಪಾಂಡವರು ಹುಟ್ಟುವ ಕಾಲದಲ್ಲಿ ಪಾಂಡು ರಾಜನು ರಾಜ್ಯವನ್ನು ಧತರಾಷ್ಟ್ರನಿಗೆ ಒಪ್ಪಿಸಿ, ತನ್ನ ಹೆಂಡತಿಯರೊಂದಿಗೆ ಅರಣ್ಯವಾಸ ಮಾಡುತ್ತ ಅಲ್ಲಿಯೇ ಮೃತಪಟ್ಟನು. ಮಾದ್ರಿ ಅವನೊಂದಿಗೇ ಸಹಗಮನ ಮಾಡಿದಳು. ಆಮೇಲೆ ಕುಂತಿ ಐವರು ಮಕ್ಕಳನ್ನೂ ಕರೆದುಕೊಂಡು ರಾಜಧಾನಿಗೆ ಬಂದು, ಧೃತರಾಷ್ಟ್ರನ ಆಶ್ರಯವನ್ನು ಸೇರಿದಳು.

ಪಾಂಡವರೈವರೂ ವಿದ್ಯಾಭ್ಯಾಸಗಳನ್ನು ಮುಗಿಸಿ ದೊಡ್ಡವರಾದ ಮೇಲೆ, ಪಾಂಚಾಲದ ರಾಜನಾದ ದ್ರುಪದನ ಮಗಳು ದ್ರೌಪದಿಯನ್ನು ಐವರೂ ಸೇರಿಯೇ ಮದುವೆಯಾದರು. ದ್ರೌಪದಿ ಐವರಿಂದಲೂ ಮಕ್ಕಳನ್ನು ಹಡೆದಳು. ಅರ್ಜುನನು ಕೃಷ್ಣನ ತಂಗಿಯಾದ ಸುಭದ್ರೆಯನ್ನು ಮದುವೆಯಾಗಿ, ಅವಳಲ್ಲಿ ಅಭಿಮನ್ಯು ಎಂಬ ಮಗನನ್ನು ಪಡೆದನು. ಮುಂದೆ ನಡೆದ ಪ್ರಸಿದ್ಧವಾದ ಭಾರತಯುದ್ಧದಲ್ಲಿ ಅಭಿಮನ್ಯು ಸಾಯುವಾಗ ಅವನ ಹೆಂಡತಿ ಉತ್ತರೆ ಗರ್ಭಿಣಿಯಾಗಿದ್ದು, ಅವಳು ಮುಂದೆ ಪರೀಕ್ಷಿತನನ್ನು ಹಡೆದಳು.

ಭಾರತ ಯುದ್ಧದಲ್ಲಿ ತನ್ನ ಮಕ್ಕಳೆಲ್ಲರೂ ಸತ್ತು ಹೋದ ಮೇಲೆ ಧೃತರಾಷ್ಟ್ರನೂ ಗಾಂಧಾರಿಯೂ ಅನಾಥರಂತಾಗಿ ಯುಧಿಷ್ಠಿರನ ಆಶ್ರಯದಲ್ಲಿ ಇರಬೇಕಾಯಿತು. ಧರ್ಮರಾಜನೆನಿಸಿದ ಯುಧಿಷ್ಠಿರನು ಅವರಿಗೆ ಯಾವ ಕೊರತೆಯೂ ಬಾರದಂತೆ ತುಂಬಾ ಆದರಿಸಿದನು. ಆದರೆ ಭೀಮನು ಮಾತ್ರ ಚುಚ್ಚು ಮಾತುಗಳಿಂದ ಧೃತರಾಷ್ಟ್ರನನ್ನು ಅವಮಾನಪಡಿಸಿಕೊಂಡೇ ಇದ್ದನು.

ಕಟ್ಟಕಡೆಗೆ ಧೃತರಾಷ್ಟ್ರನು ಗಾಂಧಾರಿಯನ್ನೂ, ವಿದುರನನ್ನೂ, ಸಂಜಯನನ್ನೂ ಕರೆದುಕೊಂಡು ವಾನಪ್ರಸ್ಥಾಶ್ರಮವನ್ನು ಕೈಕೊಂಡು ಹೊರಡಲು ನಿಶ್ಚಯಿಸಿದನು. ಕುಂತಿಯೂ ಅವರೊಂದಿಗೆ ಹೊರಟಳು. ಹಾಗೆ ಅವರೆಲ್ಲ ಅರಣ್ಯಕ್ಕೆ ಹೋದ ಮೇಲೆ ಆರು ವರ್ಷಗಳು ಕಳೆದುವು.

ಒಂದು ದಿನ ಯುಧಿಷ್ಠಿರನು ಒಂದು ಸ್ವಪ್ನವನ್ನು ಕಂಡನು. ಆ ಸ್ವಪ್ನದಲ್ಲಿ ಕಾಡಿನಲ್ಲಿ ಕುಂತೀದೇವಿ ತುಂಬ ಸೊರಗಿರುವುವನ್ನು ನೋಡಿದನು. ತುಂಬ ಕಳವಳಗೊಳ್ಳುತ್ತಾ ಎಚ್ಚೆತ್ತು ಕನಸಿನಲ್ಲಿ ಕಂಡ

ತಾಯಿಯ ಪರಿಸ್ಥಿತಿಯನ್ನು ತನ್ನ ತಮ್ಮಂದಿರೊಂದಿಗೆ ಹೇಳಿದನು. ತನಗೆ ಕುಂತಿಯನ್ನು ಮಾತ್ರವಲ್ಲ, ಧೃತರಾಷ್ಟ್ರ, ಗಾಂಧಾರಿ, ವಿದುರರನ್ನೂ ನೋಡಬೇಕೆಂದು ತೀವ್ರ ಆಸಕ್ತಿಯಾಗಿರುವುದನ್ನು ಹೇಳಿದನು.

ಪಾಂಡವರೈವರೂ ಒಮ್ಮನಸ್ಸಿನಿಂದ ಅರಣ್ಯಕ್ಕೆ ಹೋಗಲು ಸಿದ್ಧರಾದರು. ದ್ರೌಪದಿಯೂ, ಸುಭದ್ರೆಯೂ ಉತ್ತರೆಯನ್ನು ಕರೆದುಕೊಂಡು ಅವರೊಂದಿಗೆ ಹೊರಟರು. ಅನೇಕಮಂದಿ ಪುರಜನರೂ ಅವರನ್ನನುಸರಿಸಿದರು.

ಹೀಗೆ ಅವರೆಲ್ಲರೂ ಶತಯೂಪಾಶ್ರಮಕ್ಕೆ ಹೋಗಿ ಅಲ್ಲಿರುವ ಧೃತರಾಷ್ಟ್ರ, ಗಾಂಧಾರಿ, ಕುಂತಿಯರನ್ನು ನೋಡಿದರು. ವಿದುರನು ಅಲ್ಲಿರಲಿಲ್ಲ. ಅವನು ಏಕಾಂತಸ್ಥಳದಲ್ಲಿ ತಪಸ್ಸು ಮಾಡುತ್ತಿರುವನೆಂದು ಧೃತರಾಷ್ಟ್ರನು ಹೇಳಿದನು.

ಯುಧಿಷ್ಠಿರನು ವಿದುರನನ್ನು ಹುಡುಕುತ್ತಾ ಗಂಗಾತೀರವನ್ನು ಹಿಡಿದು ಬಹಳದೂರ ಹೋಗಿ, ಅಲ್ಲೊಂದು ಕಡೆ ಘೋರ ತಪಸ್ಸಿನಲ್ಲಿರುವ ವಿದುರನನ್ನು ನೋಡಿ, ತನ್ನ ಹೆಸರು ಹೇಳಿಕೊಂಡು ನಮಸ್ಕಾರ ಮಾಡಿದನು. ವಿದುರನಿಂದ ಯಾವ ಪ್ರತ್ಯುತ್ತರವೂ ಹೊರಡಲಿಲ್ಲ. ಅದಕ್ಕೆ ಬದಲಾಗಿ ವಿದುರನ ಮುಖದಿಂದ ದಿವ್ಯ ತೇಜಸ್ಸೊಂದು ಹೊರಟುಬಂದು ಯುಧಿಷ್ಠಿರನ ಮುಖದೊಳಗೆ ಪ್ರವೇಶಿಸುವುದೂ, ವಿದುರನ ಶರೀರವು ಸತ್ತು ಬೀಳುವುದೂ ಒಂದೇ ಸಾರಿ ನಡೆಯಿತು.

ಯುಧಿಷ್ಠಿರನು ಧೃತರಾಷ್ಟ್ರನ ಬಳಿಗೆ ಹಿಂದಿರುಗಿ ಬಂದು ವಿದುರನ ಮರಣವನ್ನು ಕುರಿತು ಅವನಿಗೆ ಹೇಳಿದನು. ಮುಂದೆ ಸ್ವಲ್ಪಕಾಲ ಪಾಂಡವರು ಅವರೊಂದಿಗೇ ಇದ್ದು ಆಮೇಲೆ ತನ್ನ ಪರಿವಾರದೊಂದಿಗೆ ಹಸ್ತಿನಾವತಿಗೆ ಹಿಂದಿರುಗಿದರು.

ಆಮೇಲೆ ಬಂದ ಬೇಸಗೆಯಲ್ಲಿ ಧೃತರಾಷ್ಟ್ರ, ಗಾಂಧಾರಿ, ಕುಂತಿಯರು ಕಾಡುಗಿಚ್ಚಿನ ನಡುವೆ ಸಿಕ್ಕಿ ಸುಟ್ಟು ಹೋದರು. ಅವರಿಗಿಂತ ಮೊದಲೇ ಸಂಜಯನು ಯಾವುದೋ ಒಂದು ತೀರ್ಥದಲ್ಲಿ ಮುಳುಗಿ ಸತ್ತು ಹೋಗಿದ್ದನು.

ಕೌರವ ಪಾಂಡವರು ಹಾಗೆ ಅಸ್ತಮಿಸಿದ ಮೇಲೆ ಅವರ ವಂಶದ ಅಂಕುರವಾಗಿ ಉಳಿದ ಪರೀಕ್ಷಿದ್ರಾಜನು ಒಬ್ಬ ಮುನಿಯ ಶಾಪದಿಂದ ತಕ್ಷಕನ ಕಡಿತಕ್ಕೆ ಗುರಿಯಾಗಿ ತೀರಿಹೋದನು. ಇದನ್ನು ನೋಡಿ ಪರೀಕ್ಷಿದ್ರಾಜನ ಮಗ ಜನಮೇಜಯನು ಮಹಾ ಕೋಪದಿಂದ ತಂದೆಯ ಮರಣಕ್ಕೆ ಪ್ರತೀಕಾರ ವೆಸಗಲು, ಭಯಂಕರವಾದ ಸರ್ಪಯಾಗವನ್ನು ತೊಡಗಿದನು, ಆ ಮಹಾ ಯಾಗದ ಶಕ್ತಿಯಿಂದ ಅನೇಕಾನೇಕ ಸರ್ಪಗಳನ್ನು ಅಗ್ನಿಗೆ ಆಹುತಿಯಾಗುವಂತೆ ಮಾಡಿ, ಕಡೆಗೆ ವಿರಮಿಸಿದನು.





# ಸಾಧುಗಳು ಬಂದಾರು!

ರಾಧಮ್ಮನ ಗಂಡ ಕೆಲಸಕ್ಕೆ ಹೋದ ಮೇಲೆ, ರಾಧಮ್ಮ ಬಾಗಿಲು ಹಾಕಿಕೊಂಡು ಅಡಿಗೇ ಮನೆಯಲ್ಲಿ ಏನೋ ಕೆಲಸಕ್ಕೆ ಪ್ರಾರಂಭಿಸಿದಳು; ಸ್ವಲ್ಪ ಹೊತ್ತಿಗೆ ಬಾಗಿಲ ಹೊರಗಿನಿಂದ, "ಅಮ್ಮಾ, ಅಮ್ಮಾ, ಅಮ್ಮಾವರೇ!" ಎಂದು ಹೆಂಗುಸಿನ ಕಂಠ ಧ್ವನಿ ಕೇಳಿಸಿತು. ರಾಧಮ್ಮ ಬಂದು ಬಾಗಿಲು ತೆರೆದು ನೋಡಿದಾಗ, ಹೊರಗೆ ಒಬ್ಬಳು ಮಗುವನ್ನೆತ್ತಿಕೊಂಡು ನಿಂತಿದ್ದಳು, ಅವಳು ಭಿಕ್ಷೆ ಕೇಳಲು ಬಂದಿರುವಳೆಂದುಕೊಂಡು ರಾಧಮ್ಮ "ಹೋಗಿ ಬಾರಮ್ಮ. ಇನ್ನೂ ಅಡಿಗೆಯಾಗಿಲ್ಲ" ಎಂದಳು.

"ನಾನು ಭಿಕ್ಷೆ ಕೇಳಲು ಬರಲಿಲ್ಲಮ್ಮಾ, ನಾನು ಶ್ರೀನಿವಾಸಪುರದವಳು. ನನ್ನ ಹೆಸರು ಗೌರಮ್ಮ ಅಂತ. ನಾಲ್ಕು ದಿನಗಳ ಕೆಳಗೆ ನನ್ನ ಯಜಮಾನರು ಹೊಲದಿಂದ ಮನೆಗೆ ಬರುವಾಗ. ದಾರಿಯಲ್ಲಿ ಲಂಬಾಡೀ ಪಿಶಾಚಿ ಸೋಕಿ ಹೊಟ್ಟೇ ನೋವಿನಿಂದ ನರಳಿಕೊಂಡೇ ಮನೆಗೆ ಬಂದರು. ಏನು ಮದ್ದು ಮಾಡಿದರೂ ಕಡಿಮೆಯಾಗಲಿಲ್ಲ. ರಕ್ತ ವಾಂತಿ ಬೇರೆ ಶುರುವಾಯಿತು. ಅದು ರೋಗವಾಗಿರುತ್ತಿದ್ದರೆ ಮದ್ದುಗಳಿಂದ ಕಡಿಮೆಯಾಗುತ್ತಿತ್ತು, ಲಂಬಾಡೀ ಪಿಶಾಚೀದು ಉಪದ್ರ ಅಂತ ನಮಗೇನು ಗೊತ್ತು? ಏನೂ ತೋರದೆ ನಿದ್ದೆ ಮಾಡದೆ ರಾತ್ರಿ ಬೆಳಗು ಮಾಡಿದೆವು. ಬೆಳಗ್ಗೆ ದೇವರ ಹಾಗೆ ಒಬ್ಬರು ಸಾಧುಗಳು ಬಂದರು. ಅವರ ಹತ್ತಿರ ಹೇಳಿಕೊಂಡೆವು. ಅವರು ನೋಡಿದ ಕೂಡಲೇ ಅದು ಲಂಬಾಡೀ ಪಿಶಾಚೀ ಅಂದರು. ಏನೋ ಮಂತ್ರಿಸಿ ಕೊಟ್ಟರು. ಆ ಕೊಡಲೇ ವಾಂತಿ ನಿಂತಿತು. ಹೊಟ್ಟೇ ನೋವೂ ಹೋಯಿತು. ಸ್ವಲ್ಪ ಹಣ ಕೊಡಲಿಕ್ಕೆ ನೋಡಿದೆವು. ಆ ಸಾಧುಗಳು ತೆಗೆದುಕೊಳ್ಳದೆ ಹೊರಟು ಹೋದರು. ನಿನ್ನೆ ಮತ್ತೆ ಅವರಿಗೆ ಹೊಟ್ಟೆ ನೋವು ಪ್ರಾರಂಭವಾಗಿದೆ. ಈ ಊರಿನಲ್ಲಿ ಆ ಸಾಧುಗಳನ್ನು ನೋಡಿದೆವೆಂದು ನಮ್ಮೂರಿನಲ್ಲಿ ಹೇಳುವುದು ಕೇಳಿದೆ. ಬೆಳಗ್ಗಿನಿಂದ ಈ ಊರೆಲ್ಲಾ ಹುಡುಕುತ್ತಿದ್ದೇನೆ. ಅವರು ಕಾಣಲಿಲ್ಲ. ಒಂದು ವೇಳೆ ಅವರು ನಿಮ್ಮ ಕಣ್ಣಿಗೆ ಬಿದ್ದರೆ ಅವರನ್ನು ಸ್ವಲ್ಪ ನಮ್ಮ ಶ್ರೀನಿವಾಸ ಪುರಕ್ಕೆ ಬರಲಿಕ್ಕೆ ಹೇಳಿರಿ." ಎಂದಳು ಗೌರಮ್ಮ.

"ಹಾಗೇ ಆಗಲಮ್ಮ" ಎಂದು ರಾಧಮ್ಮ ಗೌರಮ್ಮನನ್ನು ಕಳುಹಿಸಿ ಬಾಗಿಲು ಹಾಕಿಕೊಂಡು ಒಳಗೆ ಹೋದಳು.

ವಿ. ವೈ. ರಾಮಯ್ಯ



ಅವಳು ಅಡಿಗೇ ಕೆಲಸ ಮುಗಿಸಿ ದಣಿವಾರಿಸಿಕೊಳ್ಳು ತ್ತಿದ್ದಾಗ, ಹೊರಗೆ "ಮಾತಾ! ಅನ್ನಪೂರ್ಣೇಶ್ವರೀ!" ಎಂದು ಗಟ್ಟಿಯಾಗಿ ಕರೆಯುವುದು ಕೇಳಿಸಿತು.

ರಾಧಮ್ಮ ಬಾಗಿಲು ತೆರೆದು ನೋಡಿದಳು. ಒಬ್ಬ ಸಾಧು ನಿಂತಿರುವುದನ್ನು ನೋಡಿ, ಅವಳಿಗೆ ಗೌರಮ್ಮ ಹೇಳಿದ ಸಂಗತಿ ನೆನಪಿಗೆ ಬಂದಿತು. "ನಿಮಗೆ ಗೌರಮ್ಮ ಗೊತ್ತಾ ?" ಎಂದು ಕೇಳಿದಳು.

"ಯಾವ ಗೌರಮ್ಮ ಮಾತಾ ?" ಎಂದು ಸಾಧು ಕೇಳಿದ. "ಅವಳದು ಶ್ರೀನಿವಾಸಪುರವಂತೆ, ಅವಳ ಗಂಡನಿಗೆ ಲಂಬಾಡೀ ಪಿಶಾಚಿ ಬಡಿದರೆ ನೀವು ಗುಣ ಪಡಿಸಿದಿರಂತಲ್ಲಾ ? ಈಗ ಮತ್ತೆ ಅವಳ ಗಂಡನಿಗೆ ಹೊಟ್ಟೇ ನೋವು ಶುರುವಾಗಿದೆಯಂತೆ, ಆ ಸಾಧು ವನ್ನು ಹುಡುಕುತ್ತಾ ಈ ಊರಿಗೆ ಬಂದು ಹೋದಳು" ಎಂದಳು ರಾಧಮ್ಮ. "ಆ! ಈಗ ನೆನಪಿಗೆ ಬಂತು. ಈ ದಿನ ಈ ಊರಲ್ಲಿ ಕೆಲಸವಿದೆ. ನಾಳೆ ಅಲ್ಲಿಗೆ ಹೋಗುತ್ತೇನೆ" ಎಂದ ಸಾಧು.

ಈ ಸಾಧುವಿನ ಮೇಲೆ ರಾಧಮ್ಮನಿಗೆ ಆಗಲೇ ವಿಶ್ವಾಸ ಉಂಟಾಗಿಬಿಟ್ಟಿತ್ತು. "ಸ್ವಲ್ಪ ಹೀಗೆ ಒಳಗೆ ಬನ್ನಿ. ನನ್ನದೊಂದು ಸಮಸ್ಯೆ ಇದೆ" ಎಂದು ಅವನನ್ನು ಒಳಕ್ಕೆ ಆಹ್ವಾನಿಸಿ ತನ್ನ ಸಮಸ್ಯೆಯನ್ನು ಹೇಳಿದಳು.

ಸಾಧು ಅವಳು ಹೇಳುವುದನ್ನು ಶಾಂತವಾಗಿ ಕೇಳಿದ ಮೇಲೆ, "ರಾಧಮ್ಮಾ ! ಮದುವೆಯಾದ ಹೊಸತಿನಲ್ಲಿ ನೀವು ನಿಮ್ಮ ಗಂಡನಿಗೆ ಊಟ ತೆಗೆದು ಕೊಂಡು ಹೊಲಕ್ಕೆ ಹೋಗುವಾಗ, ಆಲದ ಮರದ ಬುಡದಲ್ಲಿ ಯಾರೋ ಬಿಸುಟಿದ್ದ ಮಾಟದ ನಿವಾಳಿಕೆ ಯನ್ನು ದಾಟಿರುವಿರಿ. ಆ ರಾತ್ರಿ ನಿಮಗೆ ಜ್ವರ ಬಂದು ಹತ್ತು ದಿನ ಉಪದ್ರ ಕೊಟ್ಟಿದೆ. ಆ ಕಾರಣ ದಿಂದಲೇ ನಿಮಗೆ ಸಂತಾನವಾಗಲಿಲ್ಲ. ಅದನ್ನು ಹೋಗಲಾಡಿಸಿಕೊಂಡರೆ ನೀವು ಸಂತಾನವತಿಯಾಗು ವಿರಿ" ಎಂದನು ಸಾಧು.

ಅದನ್ನೂ ನೀವೇ ಮಾಡಬೇಕೆಂದು ರಾಧಮ್ಮ ಹೇಳಿದಳು. ಸಾಧು ಹೇಳಿದ ವಸ್ತುಗಳನ್ನು ಅವನ ಮುಂದೆ ತಂದಿಟ್ಟಳು. ಸಾಧು ಅರಸಿನ ಕುಂಕುಮ ಗಳಿಂದ ರಂಗವಲ್ಲಿಗಳಿಂದ ಯಂತ್ರಕಳವನ್ನು ಬರೆದು, ಅದರ ಮೇಲೆ ಪೀಠವಿಡಿಸಿ ರಾಧಮ್ಮನನ್ನು ಕುಳಿತು ಕೊಳ್ಳಲು ಹೇಳಿದನು. ಮಂತ್ರೋಚ್ಚಾರಮಾಡುತ್ತಾ ನಿಂಬೆ ಕಾಯಿಗಳನ್ನು ಕೊಯಿದು ಅವಳ ತಲೇ ಮೇಲಿ ನಿಂದ ಆಚೆಗೂ ಈಚೆಗೂ ಉರುಳಿಸಿದನು. ತೆಂಗಿನ ಕಾಯಿಯನ್ನು ಒಡೆದು ನೀರನ್ನು ಅವಳ ತಲೆಯ ಮೇಲೆ ಚಿಮುಕಿಸಿದನು. ಚೀಲ ದೊಳಗಿನಿಂದ ಒಂದು ತಾಯತ್ತನ್ನು ತೆಗೆದು ಅವಳ ಹಣೆಗೆ ಕಟ್ಟಿದನು. ಆ ಮೇಲೆ ಕರ್ಪೂರಾರತಿಯನ್ನು ಸುತ್ತುತ್ತಾ ಅವಳ ಮುಖಕ್ಕೆ ಹಿಡಿದನು. ಕರ್ಪೂರದ ವಾಸನೆಯಿಂದ ರಾಧಮ್ಮನಿಗೆ ಜ್ಞಾನತಪ್ಪುವಹಾಗಾಯಿತು. ಸಾಧು ತಾಯತ್ತನ್ನು ಹಣೆಯಿಂದೆತ್ತಿ ಅವಳ ಕೊರಳಿಗೆ ಕಟ್ಟುತ್ತ ಅವಳ ಕೊರಳಿನಲ್ಲಿದ್ದ ಬಂಗಾರದ ಎರಡೆಳೆಯ

ಸರವನ್ನು ತಾನೆತ್ತಿಕೊಂಡನು. ರಾಧಮ್ಮ ಕಣ್ಣು ಮುಚ್ಚಿ ನಿಶ್ಚಲಳಾಗಿದ್ದಳು. ಸಾಧು ಅವಳ ಮುಖಕ್ಕೆ ನೀರು ತಳಿದ ಮೇಲೆ ಕಣ್ಣು ತೆರೆದಳು.

"ಇನ್ನು ನೀವು ಖಂಡಿತವಾಗಿ ಸಂತಾನವತಿಯಾಗು ವಿರಿ ಮಾತಾ!" ಎಂದು ಸಾಧು ತನ್ನ ಪೂಜಾ ವಸ್ತುಗಳನ್ನು ಚೀಲಕ್ಕೆ ಹಾಕಿಕೊಂಡನು. ರಾಧಮ್ಮ ಒಳಗಿನಿಂದ ಇಪ್ಪತ್ತು ರೂಪಾಯಿಗಳನ್ನು ತಂದು ಅವನ ಮುಂದಿಟ್ಟಳು. "ಬೇಡಮ್ಮಾ ಬೇಡ. ಹುಂ, ನಿಮಗೆ ತೃಪ್ತಿಯಾಗಲೀ ಅಂತ ತೆಗೆದುಕೊಳ್ಳುತ್ತೇನೆ ಮಾತಾ!" ಎಂದು ಆ ರೂಪಾಯಿಗಳನ್ನು ತೆಗೆದುಕೊಂಡು ಹೊರಟು ಹೋದನು.

ರಾಧಮ್ಮ ಅತ್ಯಂತ ಸಂತೋಷದಿಂದ ತನಗೆ ಹುಟ್ಟಲಿರುವ ಮಗುವನ್ನು ಕುರಿತು ಆಲೋಚಿಸುತ್ತ ನಿದ್ರಿಸಿದಳು. ಆ ಮೇಲೆ ಅವಳ ಗಂಡ ರಾಮಪ್ಪ ಬಂದು ಕರೆದಾಗಲೇ ಅವಳಿಗೆ ಎಚ್ಚರವಾಗಿ ಬಂದು ಬಾಗಿಲು ತೆರೆದಳು. ಒಳಗೆ ಬಂದ ರಾಮಪ್ಪ ಅಲ್ಲಿ ಕಂಡ ಅರಸಿನ ಕುಂಕುಮ ರಂಗವಲ್ಲಿಗಳ ದೃಶ್ಯನೋಡಿ ಇದೇನೆಂದು ಕೇಳಲು ರಾಧಮ್ಮ ನಡೆದುದನ್ನೆಲ್ಲಾ ಉತ್ಸಾಹದಿಂದ ಹೇಳಿದಳು.

"ಏನೋ ಅಪ್ಪ! ಯಾರ ಹುಚ್ಚೋ ಅದೇ ಅವರಿಗೆ ಆನಂದ" ಎಂದ ರಾಮಪ್ಪ. ಗಂಡನ ನಿರಾಸಕ್ತಿ ರಾಧಮ್ಮನಿಗೆ ಬೇಸರವಾಯಿತು. ರಾತ್ರಿ ರಾಮಪ್ಪ ಊಟ ಮುಗಿಸಿ ಮಲಗಿಕೊಂಡಿರುವಾಗ, ರಾಧಮ್ಮ ವೀಳ್ಯಕ್ಕೆ ಸುಣ್ಣ ಹಚ್ಚಿ ಅವನಿಗೆ ನೀಡುತ್ತಿರಲು, ರಾಮಪ್ಪ ಅವಳ ಕುತ್ತಿಗೆಯಲ್ಲಿರುವ ತಾಯತ್ತನ್ನು ಹಿಡಿದು, "ಇದುವೇ ನಿನಗೆ ಮಗುವನ್ನು ಕೊಡುವುದೇನು ?" ಎಂದು ಕೇಳಿದ.

"ನಿಮಗೆ ಪ್ರತಿಯೊಂದೂ ತಮಾಷೆಯೇ!" ಎಂದು ಅವಳು ತನ್ನ ಕೊರಳನ್ನು ತಡವಿಕೊಂಡಳು. ಬಂಗಾರದ ಸರ ಕೈಗೆ ತಗಲಲಿಲ್ಲ. ಅವಳ ಮುಖವು ಒಮ್ಮೆಗೇ ಕಂದಿ ಹೋಯಿತು. ದಿಗಿಲುಗೊಂಡು ಎದ್ದು ಹೋಗಿ ಮನೆಯೊಳಗೆಲ್ಲಾ ಹುಡುಕಿದಳು. ಗಂಡನನ್ನು ಮಂಚದ ಮೇಲಿನಿಂದ ಎಬ್ಬಿಸಿ, ಹಾಸಿದ ಬಟ್ಟೆಗಳನ್ನೆಲ್ಲಾ ಕೊಡರಿ ಕೊಡರಿ ನೋಡಿದಳು.



ಅವಳ ಗಡಿಬಿಡಿಯ ಕೆಲಸ ನೋಡಿ ರಾಮಪ್ಪ, "ಏನು ಹುಡುಕುವುದು ?" ಎಂದು ಕೇಳಿದನು. "ಕೊರಳಲ್ಲಿದ್ದ ಎರಡೆಳೆಯ ಬಂಗಾರದ ಸರ. ಬೆಳಗ್ಗ ಸ್ನಾನ ಮಾಡಿ ಕೊರಳಿಗೆ ಹಾಕ್ಕೊಂಡದ್ದು ನೆನಪಿದೆ. ಹಾಕ್ಕೊಳ್ಳುವಾಗ ಅದರ ಕೊಂಡಿಗೆ ದಾರ ಸುತ್ತಿತ್ತು. ಅದನ್ನೆಲ್ಲ ಬಿಡಿಸಿ ಹಾಕಿಕೊಂಡಿದ್ದೆ!" ಎಂದಳು ಕಣ್ಣೀರು ತುಂಬಿಕೊಂಡು ರಾಧಮ್ಮ.

ರಾಮಪ್ಪನಿಗೆ ಇನ್ನೇನೂ ಅನುಮಾನವಿರಲಿಲ್ಲ. ಆಗಲೇ ಆ ಸಾಧುವನ್ನು ಹುಡುಕಲು ಹೊರಟು ಊರೊಳಗೆಲ್ಲಾ ಗಾಳಿಸಿದನು. ಸಾಧುವಿನ ಜಾಡು ಗೊತ್ತಾಗಲಿಲ್ಲ. ಊರಿಗೆ ಉತ್ತರ ದಿಕ್ಕಿನಲ್ಲಿ ಒಂದು ಮೈಲಿ ದೂರದಲ್ಲಿ ಒಂದು ಹಾಳು ದೇವಾಲಯ ವಿದ್ದುದು ನೆನಪಾಗಿ ಅಲ್ಲಿಗೆ ಹೋಗಿ ನೋಡ ಬೇಕೆಂದು ತೋರಿತು. ರಾಮಪ್ಪನು ತನ್ನ ಒಕ್ಕಲಿಗನಾದ ಆಳೊಬ್ಬನನ್ನು ಸಹಾ ಕರೆದುಕೊಂಡು ಅಲ್ಲಿಗೆ ಹೊರಟನು.

ಕತ್ತಲೆಯಾದರೂ ನಕ್ಷತ್ರಗಳ ಪ್ರಕಾಶದಲ್ಲಿ ದೇವಾಲಯದ ಮೆಟ್ಟಲಿನ ಮೇಲೆ ಚಿಕ್ಕ ಹುಡುಗನೊಬ್ಬ ಕುಳಿತಿರುವುದು ಕಾಣಿಸಿತು. ದೇವಾಲಯದೊಳಗಿನ ಒಂದು ಮೂಲೆಯಲ್ಲಿ ಯವಳೋ ಒಬ್ಬಳು ಅಡಿಗೆ ಮಾಡುತ್ತಿರುವಳೆಂದು ರಾಮಪ್ಪನಿಗೆ ಗೊತ್ತಾಯಿತು. ಇಬ್ಬರೂ ಅಡಗಿ ನೋಡುತ್ತಿದ್ದರು.

ಯಾವನೋ ಒಬ್ಬನು ಕುಡಿದ ಮತ್ತಿನಲ್ಲಿ ಹಾಡುತ್ತ ತೂರಾಡಿಕೊಂಡು ಬಂದು ದೇವಾಲಯದೊಳಗೆ ಹೊಕ್ಕನು. ಹುಡುಗನೂ ಎದ್ದು ಒಳಗೆ ಹೋದನು. ರಾಮಪ್ಪನೂ ಆಳೂ ಒಳಗೆ ಹೊಕ್ಕು ಗೋಡೆಯ ಮರೆಯಲ್ಲಿ ಅಡಗಿ ನೋಡಿದರು.

ಕುಡುಕನು ತನ್ನ ಕೈಯಲ್ಲಿದ್ದ ಸೀಸೆಯನ್ನು ಕೆಳಗಿಟ್ಟು "ನೋಡೇ, ಏನು ತಂದಿದ್ದೇನೇ ಅಂತ !" ಎಂದು ಬಂಗಾರದ ಸರವನ್ನು ತೆಗೆದು ಅವಳಿಗೆ ತೋರಿಸಿದನು.

ಕೂಡಲೇ ರಾಮಪ್ಪನೂ ಆಳೂ ಒಮ್ಮೆಲೇ ಒಳಗೆ ನುಗ್ಗಿ ಆ ಸರವನ್ನು ಎಳೆದುಕೊಂಡರು. ಆ ಮೇಲೆ ಹೊಡೆದು ಗುದ್ದಿ ಅವನನ್ನು ಚೆನ್ನಾಗಿ ಹದ ಮಾಡಿ ಹಾಕಿದರು.

ಅವನ ಮತ್ತೆಲ್ಲಾ ಇಳಿದು ಅವರ ಕಾಲ ಮೇಲೆ ಬಿದ್ದು ಹೊರಳಾಡುತ್ತ "ಕೊಲ್ಲಬೇಡಿ! ಕೊಲ್ಲಬೇಡಿ! ಇನ್ನೆಂದೂ ಹೀಗೆ ಮಾಡುವುದಿಲ್ಲ!" ಎಂದು ಆರ್ತನಾದ ಮಾಡತೊಡಗಿದ, ಅವನ ಹೆಂಡತಿ ಗೌರಮ್ಮ ಕೂಡಾ ಬಿದ್ದುಬಿದ್ದು ಬೇಡಿಕೊಂಡಳು.

ರಾಮಪ್ಪ ಮನೆಗೆ ಬಂದು ರಾಧಮ್ಮನಿಗೆ ಸರವನ್ನು ಕೊಡುತ್ತ, "ಆ ಸಾಧು ನಿನ್ನ ಸರವನ್ನು ತೆಗೆಯುವಾಗ ನಿನ್ನ ಬುದ್ಧಿ ಎಲ್ಲಿಗೆ ಹೋಯಿತು ?" ಎಂದನು. ರಾಧಮ್ಮನಿಂದ ಮಾತೇ ಬರಲಿಲ್ಲ.



# ಸದ್ವಿನಿಯೋಗ

ವೆಂಕಟಕೃಷ್ಣಯ್ಯ ಧನಿಕರಾದರೂ ಪರಮ ಲೋಭಿ. ಅವರು ಹೆಂಡತಿಯ ಕಾಟವನ್ನು ತಾಳಲಾರದೆ ತೀರ್ಥ ಯಾತ್ರೆಗೆ ಹೊರಡಲೇ ಬೇಕಾಯಿತು. ಮನೆಯ ಬಾಧ್ಯತೆಯನ್ನು ಮಗನ ಮೇಲೆ ಹಾಕಿ, ಹೆಂಡತಿಯೊಂದಿಗೆ ತೀರ್ಥಯಾತ್ರೆಗೆ ಹೊರಟರು.

ಅವರ ಮನೆಗೆ ಬಾವಿ ಇರಲಿಲ್ಲ. ಊರ ಬಾವಿಯಿಂದ ನೀರು ತರಬೇಕು. ಮಗ ಶೀನಪ್ಪ ಎಷ್ಟೋ ಸಾರಿ ಮನೆಗೊಂದು ಬಾವಿ ಬೇಕೆಂದು ಹೇಳಿದ್ದ. "ನೋಡೋಣ" ಎನ್ನುತ್ತಾ ವೆಂಕಟಕೃಷ್ಣಯ್ಯ ದಿನ ದೂಡಿದ್ದರು. ಬಾವಿಗಾಗಿ ಹಣ ಖರ್ಚು ಮಾಡಲು ಅವರಿಗೆ ಇಷ್ಟವಿಲ್ಲ.

ತಂದೆ ನೋಡೋಣವೆಂದು ಹೇಳಿದುದರಿಂದ, ತಾನು ಬಾವಿ ತೋಡಿಸಿದರೆ ಆಕ್ಷೇಪಿಸಲಾರರೆಂದುಕೊಂಡು, ಶೀನಪ್ಪ ಮನೆಯ ಹಿಂಬದಿಯಲ್ಲಿ ಬಾವಿ ತೋಡಿಸತೊಡಗಿದನು. ಆಗ ಎರಡಡಿ ಆಳದಲ್ಲೇ ಒಂದು ಕಬ್ಬಿಣದ ಪೆಟ್ಟಿಗೆ ಸಿಕ್ಕಿತು. ಅದರ ತುಂಬಾ ಹಣವೂ ಚಿನ್ನದ ನಗಗಳೂ ಇದ್ದುವು. ಇವೆಲ್ಲಾ ಎಲ್ಲಿಯವೆಂದು ಶೀನಪ್ಪನಿಗೆ ಅರ್ಥವಾಗಲಿಲ್ಲ.

"ಅಯ್ಯಾ, ಅದು ನಿಮ್ಮ ಪೂರ್ವೀಕರದೇ. ಧರ್ಮಾತ್ಮರು! ಆ ಧನವನ್ನು ನಮ್ಮಂಥ ಬಡವರಿಗೆ ಹಂಚಿ ಪುಣ್ಯಕಟ್ಟಿಕೊಳ್ಳಿ ಸ್ವಾಮಿ" ಎಂದರು ಕೂಲಿಗಳು.

ಆಕಸ್ಮಿಕವಾಗಿ ಬಂದ ಹಣ! ಶೀನಪ್ಪ ಧರ್ಮಬುದ್ಧಿಯವನಾದುದರಿಂದ ಆ ಹಣವನ್ನೂ ಚಿನ್ನಗಳನ್ನೂ ಬಡವರಿಗೆ ಹಂಚಿ ಕೊಟ್ಟುಬಿಟ್ಟನು.

ವೆಂಕಟಕೃಷ್ಣಯ್ಯ ತಿರುಗಿ ಬಂದು ಬಾವಿಯನ್ನು ನೋಡಿ, ತಾನು ಅಲ್ಲಿ ಹುಗಿದಿಟ್ಟ ಕಬ್ಬಿಣದ ಪೆಟ್ಟಿಗೆ ಏನಾಯಿತೆಂದು ಕೇಳಿದರು. ಶೀನಪ್ಪ ನಡೆದ ಸಂಗತಿ ಹೇಳಿದ. ಲೋಭಿಯ ಜೀವ ಮಲಮಲ ಮರುಗಿತು. ತಾನು ಅಲ್ಲಿ ಹುಗಿದ ಧನದ ಸಂಗತಿಯನ್ನು ಅವರು ತನ್ನ ಹೆಂಡತಿಗೆ ಕೂಡಾ ಹೇಳಿರಲಿಲ್ಲ!



# ಫೋಟೋ ಶೀರ್ಷಿಕೆಯ ಸ್ಪರ್ಧೆ :: ಬಹುಮಾನ ರೂ. ೨೫

## ಗೆದ್ದ ಶೀರ್ಷಿಕೆಗಳು ೧೯೭೭ ಜುಲೈ ಸಂಚಿಕೆಯಲ್ಲಿ ಪ್ರಕಟವಾಗುತ್ತವೆ





M. Natarajan — Devidas Kasbekar

* ಮೇಲಿನ ಫೋಟೋಗಳಿಗೆ ಸರಿಹೊಂದುವಂತೆ ಒಂದು ವಾಕ್ಯದಲ್ಲಾಗಲೀ, ಸಂಬಂಧಿಸಿದಂತಿರುವ ಎರಡು ವಾಕ್ಯಗಳಲ್ಲಾಗಲೀ ಶೀರ್ಷಿಕೆ ಬರೆಯಬೇಕು.
* ಮೇ ೧೫ ರೊಳಗೆ ಶೀರ್ಷಿಕೆಗಳು ನಮಗೆ ತಲಪಬೇಕು. ಆಮೇಲೆ ಬಂದ ಶೀರ್ಷಿಕೆಗಳು ಪರಿಶೀಲಿಸಲ್ಪಡುವುದಿಲ್ಲ.
* ನಮಗೆ ಬಂದ ಶೀರ್ಷಿಕೆಗಳಲ್ಲಿ ಅತ್ಯುತ್ತಮವಾದ ಒಂದು ಜತೆಗೆ ರೂಪಾಯಿ ೨೫ ಬಹುಮಾನ.
* ಶೀರ್ಷಿಕೆಗಳನ್ನು ಪೋಸ್ಟುಕಾರ್ಡಿನಲ್ಲೇ ಬರೆಯಬೇಕು. ಅದರಲ್ಲಿ ಬೇರೆ ವಿಷಯ ಬರೆಯಬಾರದು. ವಿಳಾಸ: ಚಂದಮಾಮ ಫೋಟೋ ಶೀರ್ಷಿಕೆಯ ಸ್ಪರ್ಧೆ, ಮದರಾಸು - ೬೦೦೦೨೬

---

## ಮಾರ್ಚಿ ಸ್ಪರ್ಧೆಯ ಫಲಿತಾಂಶ :

ಮೊದಲನೇ ಫೋಟೋ : ಮಕ್ಕಳ ವರ್ಷದ ಮಂಗಳ ವಾದ್ಯ

ಎರಡನೇ ಫೋಟೋ : ನಮ್ದೋ ಎಲ್ಲಾ ಥಂಥಪ ಥಂಥಂ

ಕಳುಹಿಸಿದವರು : ಪಿ. ಎನ್. ರಾಜಶ್ರೀ,

೨೩., ನಾಯಕುಲು ಬೀದಿ, ಮದರಾಸು - ೬೦೦೦೦೩.

Printed by B. V. REDDI at Prasad Process Private Ltd., and Published by B. VISWANATHA REDDI for CHANDAMAMA CHILDREN'S TRUST FUND (Prop. of Chandamama Publications) 2 & 3, Arcot Road, Madras-600 026 (India). Controlling Editor : NAGI REDDI.

**Results of Chandamama-Camlin Colouring Contest No. 7 (Kannada)**

*1st Prize* : Lislie Stivenson Liari, Mandya. *2nd Prize* : B. N. Mamtha, Bangalore. *3rd Prize* : Sanjay Krishna Bhat, Kumta. *Consolation Prizes* : C. Sathya Narayana, Yelhurga. Shridhora N. Saliam, Bombay. K. Nataraj, Bangalore. M. S. Yoganathan, Mysore. B. R. Narayanaswamy, Bangalore.

DADDY MUMMY AND...






ನಾನು ನನ್ನ ಈಕೋ
ಸ್ಕೆಚ್ ಪೆನ್‌ನಿಂದ ಈ
ರೂಪರೇಖೆಗಳನ್ನು ಗಿಚಿದ್ದು

# EKCO

## ಸ್ಕೆಚ್ ಪೆನ್

ಬಣ್ಣಗಳೆಂದರೆ ಮಕ್ಕಳಿಗೆ ಅಚ್ಚುಮೆಚ್ಚು. ಬಣ್ಣಗಳಿಂದ ಚಿತ್ರ ತೆಗೆಯುವುದೆಂದರೆ ಅವರಿಗೆ ಬಲು ಪ್ರೀತಿ. ನಿಮ್ಮ ಮಕ್ಕಳಲ್ಲಿ ಸುಪ್ತವಾಗಿರುವ ಕಲೆಯು ಹೊರಹೊಮ್ಮಲು ನೆರವಾಗಿರಿ. ಅವರಿಗೆ ಒಂದು ಎಕ್ಕೊ ಸ್ಕೆಚ್ ಪೆನ್ನಿನ ಆಕರ್ಷಕ ಪ್ಯಾಕ್‌ನ್ನು ತಂದುಕೊಡಿರಿ. ಅವು ಮನಮೋಹಕ ಬಣ್ಣಗಳಲ್ಲಿ ದೊರೆಯುತ್ತವೆ.

EKCO
SKETCH PEN
FOR
SKETCHING
COLOURING • SIGNING

ಹಂಚಿಕೆದಾರರು : ಕಿರಣ ಅಂಡ್ ಕಂಪನಿ
73,75 ದಾವಸೇಟ್ ಸ್ಟ್ರೀಟ್, ಮುಂಬಯಿ 400 002
ಟೆಲಿಫೋನ್: 324432

ಎಕ್ಕೊ ಸ್ಕೆಚ್ ಪೆನ್ನುಗಳಿಂದ ಬರೆಯುವುದೇ
ಒಂದು ಆನಂದ

ADVERTS/WP/216/K/68

# ಚಿಕ್ಕ ಮಕ್ಕಳು
# ಪ್ರೀತಿ ಬಯಸಿವೆ, ಪ್ರೀತಿ ಪಡೆಯುತ ಮತ್ತೆ ಬೆಳೆದಿವೆ




ಪ್ರೀತಿಯ ಇನ್ನೊಂದು ಹೆಸರು

## ಪಾರ್ಲೆ ಗ್ಲುಕೋ

## ಅಪೂರ್ವವಾದ ರುಚಿ
## ತುಂಬಿ ತುಳುಕುವ ಶಕ್ತಿ

ಹಾಲು, ಗೋದಿ, ಸಕ್ಕರೆ ಮತ್ತು ಗ್ಲುಕೋಸ್‌ಗಳ
ಹಿತಕಾರೀ ಸತ್ವಗಳಿಂದ ಸಮೃದ್ಧವಾಗಿವೆ.

ಪಾರ್ಲೆ
ಗ್ಲುಕೋ

ಭಾರತದ ಅತ್ಯಧಿಕ ಮಾರಾಟವಾಗುವ ಬಿಸ್ಕಿಟ್ –
ವರ್ಲ್ಡ್ ಅವಾರ್ಡ್‌ನ ವಿಜಯಿ

everest/78/PP/131 kn



# ಕರಡಿ ಕೆಂಗಣ್ಣ

## ೧೦

[ಕಟುಕಕರಡಿಯುವನು ದುರ್ಮುಖಿ ರಾಜನ ತಲೆಯನ್ನು ಕಡಿಯದಂತೆ ಉಗ್ರದಂಡ ರಾಕ್ಷಸನು ಕಾಪಾಡಿದನು. ಅವನನ್ನು ಕರಡಿ ಕೆಂಗಣ್ಣ ಮಾಂತ್ರಿಕನ ಬಳಿಗೆ ಕರೆದೊಯ್ಯುವ ಬಾಧ್ಯತೆ ರಾಕ್ಷಸನದಾಯಿತು. ಆಟವಿಕನು ಕಟುಕ ಕರಡಿಯುವನ ಬಂಟನಾಗಿರಲು ಒಪ್ಪಿ ಅವನೊಂದಿಗೆ ಹೊರಟನು. ಹೀಗೆ ಅವರೆಲ್ಲ ರಾಜಧಾನಿಗೆ ಹೊರಟರು. ಆಗ ಎರಡು ಆನೆಗಳ ಮೇಲಿನವರು ಇವರನ್ನು ಅಡ್ಡಗಟ್ಟಿ ಬಾಣ ಪ್ರಯೋಗ ಮಾಡ ತೊಡಗಿದರು.]

ಆ ಬಾಣದ ದಾಳಿಯನ್ನು ನೋಡಿ ಕಟುಕಕರಡಿಯುವನು ಏನೂ ಹೆದರಲಿಲ್ಲ. ಅವನ ಸೊಂಡಿಲು ಮುರಿದ ಆನೆಯೂ ಹೆದರಲಿಲ್ಲ. ಕರಡಿಕಟುಕನು ತನ್ನ ಮೇಲೆ ಬರುವ ಬಾಣಗಳಿಗೆ ತನ್ನ ಚಪಗೊಡಲಿಯನ್ನು ಅಡ್ಡಹಿಡಿದು ಬೀಸುತ್ತ, ತಾಗಿದ ಬಾಣಗಳು ದೂರಬೀಳುವಂತೆ ಮಾಡುತ್ತಿದ್ದನು. ಸೊಂಡಿಲು ಮುರಿದ ಅವನ ಆನೆಯನ್ನು ಸಮೀಪ ಬಂದ ಸೈನಿಕರ ಆನೆಗಳ ಮೇಲೆ ಹುರುಡಿಸಿಬಿಟ್ಟನು. ಕೂಡಲೇ ಆ ಎರಡು ಆನೆಗಳೂ ಕರಡಿಕಟುಕನ ಆನೆಯನ್ನು ಢೀಕೊಟ್ಟುವು. ಮೂರು ಆನೆಗಳ ಕರ್ಣಕರ್ಕಶ ಘೀಂಕಾರಗಳು ಕಾಡಿನೊಳಗೆಲ್ಲಾ ಮಾರ್ಮೊಳಗಿದುವು. ಸೊಂಡಿಲುಗಳಿಂದ ಒಂದನ್ನೊಂದು ಹಿಡಿಯಲೂ ಎಳೆಯಲೂ ನೋಡಿದುವು. ದಾಡೆಗಳಿಂದ ಹಾಯ್ದುವು. ಪಕ್ಕದಲ್ಲಿದ್ದ ಗಿಡ ಮರಗಳು ಮುರಿದುವು. ಆಗ ಕಟುಕಕರಡಿಯುವನು "ಜೈ ಶಿರೀಷವನ ಭೈರವಾ!" ಎಂದು ಕೂಗುತ್ತ ತನ್ನ ಚಪಗೊಡಲಿಯನ್ನು ಒಬ್ಬ ಸೈನಿಕನ ಆನೆಯ ದಂತಗಳ ಮೇಲೆ ಹೊಡೆದನು. ಆ ಕೊಡಲಿಯ ಏಟಿಗೆ ಆ ಆನೆಯ ಒಂದು ದಂತವು ಉದುರಿ ಕೆಳಗೆ ಅಷ್ಟು ದೂರಬಿತ್ತು. ಈ ಸೆಣಸಾಟದಲ್ಲಿ ಕುಂಭಸ್ಥಳದ



ಮೇಲಿದ್ದ ಆಟವಿಕಯುವಕನು ಜಾರಿ ಕೆಳಗೆ ಬಿದ್ದನು. ದಂತ ಮುರಿದುಹೋದ ಆನೆ ಕರಡಿ ಕಟುಕನ ರಭಸಕ್ಕೆ ತಾಳಲಾಗದೆ ಹಿಂದಿರುಗಿ ಓಡಲು ನೋಡಿತು. ಅಷ್ಟರಲ್ಲಿ ಎರಡನೇ ಆನೆಯ ಮೇಲಿದ್ದ ಸೈನಿಕರು ಮಹಾಭಯದಿಂದ ಆರ್ತನಾದ ಮಾಡುತ್ತ, "ಓ! ಓ! ಈ ಆನೇ ಮೇಲಿರುವವನು ಕರಡೀ ವೇಷ ಹಾಕಿದ ಹಾಸ್ಯಗಾರನೂ ಅಲ್ಲ. ಬೀದೀ ಭಾಗವತದ ವೇಷಗಾರನೂ ಅಲ್ಲ. ನಾವು ಅಂದುಕೊಂಡದ್ದೆಲ್ಲಾ ತಪ್ಪಾಯಿತ್ತು. ಇದು ಯಾವುದೋ ಯುದ್ಧ ತಂತ್ರಕಲಿತ ಕರಡಿಯೇ ನಿಜ! ಈ ಆನೆಯೂ ಭೂತಾವೇಶಿತವಾದ ಮಂತ್ರದಾನೆ! ಇವರ ಮಧ್ಯದಲ್ಲಿ ನಾವು ಸಿಕ್ಕಿ ಕೆಟ್ಟೆವಲ್ಲಾ!" ಎನ್ನುತ್ತಾ ತಮ್ಮ ಆನೆಯನ್ನು ಹಿಂದಕ್ಕೆ ತಿರುಗಿಸಿದರು.

ಕಟುಕಕರಡಿಯುವನು ಕೆಳಗೆ ಬಿದ್ದು ಏಳದಿರುವ ಆಟವಿಕಯುವಕನನ್ನು ನೋಡಿ, "ಬಿದ್ದೆಯಾ! ಹಾಗೇ ಬಿದ್ದಿರು. ಸ್ವಲ್ಪಹೊತ್ತಿಗೆ ಸರಿಯಾಗುತ್ತೆ! ಹುಂ, ಈ ಆನೇ ಮೇಲಿನವರನ್ನು ತಪ್ಪಿಸಲು ಬಿಡಬಾರದು" ಎನ್ನುತ್ತಾ, ತನ್ನ ವಾಹನವನ್ನು ವೇಗವಾಗಿ ಮುಂದಕ್ಕೆ ಓಡಿಸಿ ಆ ಎರಡು ಆನೆಗಳನ್ನೂ ಅಡ್ಡಗಟ್ಟಿ, "ಎಲೋ! ನಾನು ನಿಜವಾದ ಕರಡಿ ಮಾತ್ರವಲ್ಲ, ತಲೆಗಳನ್ನು ಕಡಿಯುವುದೇ ವೃತ್ತಿಯಾಗಿರುವ ಕಟುಕರಮುಖಂಡ ನಾನು! ಸ್ವಲ್ಪ ಹೊತ್ತಾದರೂ ನೀವು ಬದುಕಿರಬೇಕಾದರೆ ಓಡಿ ಹೋಗುವ ಆಲೋಚನೆ ಬಿಟ್ಟು, ನಾನು ಕೇಳುವ ಪ್ರಶ್ನೆಗಳಿಗೆ ಉತ್ತರ ಕೊಡಬೇಕು. ನಿಲ್ಲಿರಲ್ಲೇ!" ಎಂದು ಗರ್ಜಿಸಿದನು.

ಕಟುಕಕರಡಿಯುವನ ರೂಪವನ್ನೂ, ಕಣ್ಣುಗಳನ್ನೂ, ಚಪಗೊಡಲಿಯ ಹೊಳವನ್ನೂ, ಭೀಕರ ಕಂಠಸ್ವರವನ್ನೂ ಕೇಳಿ ಆ ಸೈನಿಕರು ನಖಶಿಖಾಂತವಾಗಿ ನಡುಗಿದರು.

ಕರಡಿಕಟುಕನು ತನ್ನ ಮೊಂಡು ಸೊಂಡಿಲಿನ ಆನೆಯನ್ನು ಸೈನಿಕರ ಆನೆಯ ಸುತ್ತಲೂ ವೇಗವಾಗಿ ಎರಡು ಪ್ರದಕ್ಷಿಣೆ ತಿರುಗಿಸಿ, ಚಪಗೊಡಲಿಯನ್ನು ಒಂದು ಆನೆಯ ತಲೆಗೆ ತಗಲಿಸಿ, ಸೈನಿಕರನ್ನು ನೋಡಿ, "ಹೇಳಿರಿ ಈಗ. ನೀವು ಯಾರು? ದುರ್ಮುಖರಾಜನಿಗೆ ಜೈ ಅಂತ ಕೂಗಿದಿರಲ್ಲಾ? ಆ ರಾಜನ ತಲೆ ನನ್ನ ಅಡವಿನಲ್ಲಿದೆ. ಒಂದು ವೇಳೆ ನಿಮ್ಮ ದುರ್ಮುಖರಾಜನು ರಾಜ್ಯವಾಳುವ ರಾಜನಲ್ಲದೆ, ಯಾವುದಾದರೂ ಗದ್ದೆ ಹೂಡುವ ಬೇಸಾಯದ ರಾಜನೋ? ಹೇಳಿರಿ! ಯಾವ ದುರ್ಮುಖ ರಾಜನ ಕಡೆಯವರು ನೀವು?" ಎಂದು ಕೇಳಿದನು.

ಅವನ ಪ್ರಶ್ನೆ ಕೇಳಿ ಸೈನಿಕರಲ್ಲೊಬ್ಬನು ಕಟುಕ ಕರಡಿಯುವನಿಗೆ ತಲೆಬಾಗಿ ಕೈಮುಗಿದು, "ಭಲ್ಲೂಕ ಮಹಾರಾಜಾ! ನಾವು ಜಯಕಾರ ಮಾಡಿದ್ದು ಉದಯಗಿರಿ ರಾಜ್ಯವನ್ನಾಳುವ ದುರ್ಮುಖ ಮಹಾರಾಜರಿಗೇ. ಅವರನ್ನು ಈ ಅರಣ್ಯದಲ್ಲಿ ಯಾರೋ ಗಜವಾಹನದವರು ಹಿಡಿದು ಬಂಧಿಸಿದರೆಂದು ವರ್ತ

ಮಾನ ಬಂತು. ಅವರನ್ನು ಹುಡುಕುತ್ತಾ ಹೀಗೆ ಬಂದು, ಆನೆಯ ಮೇಲಿದ್ದ ನಿಮ್ಮನ್ನು ನೋಡಿ ಅಪಾರ್ಥ ಮಾಡಿಕೊಂಡು ಬಾಣ ಪ್ರಯೋಗ ಮಾಡಿದೆವು. ಕ್ಷಮಿಸಬೇಕು. ನಮ್ಮ ಶತ್ರುಗಳು ಬೇರೆ ಯಾರೋ ಗಜವಾಹಕರು." ಎಂದನು.

ಅವನು ಹೇಳಿದುದನ್ನು ಕೇಳಿ ಕಟುಕಕರಡಿಯವನು ಆಶ್ಚರ್ಯಪಡು... "ಅಷ್ಟು ದೊಡ್ಡ ರಾಜನನ್ನು ಶತ್ರುಗಳ ಕೈಯಿಂದ ಕಾಪಾಡಲಿಕ್ಕೆ ನೀವು ಕೇವಲ ನಾಲ್ಕು ಮಂದಿ ಸೈನಿಕರು ಮಾತ್ರ ಈ ಮಹಾರಣ್ಯದೊಳಗೆ ಪ್ರವೇಶಿಸಿದಿರೇನು? ಅಲ್ಲ ಹಿಂದಿನಿಂದ ದೊಡ್ಡ ಸೈನ್ಯವೇನಾದರೂ ಬರುತ್ತಾ ಇದೆಯೋ?" ಎಂದನು.

ಈ ಪ್ರಶ್ನೆ ಕೇಳಿ ನಾಲ್ವರು ಸೈನಿಕರು ಒಬ್ಬರ ಮುಖವನ್ನೊಬ್ಬರು ನೋಡಿದರು. ಅವರ ಮುಖಗಳಲ್ಲಿ ಬಿಳುಪು ತಟ್ಟಿತು. ಅದನ್ನು ನೋಡಿ ಕರಡಿಕಟುಕನು ತನ್ನ ಚಪಗೊಡಲಿಯನ್ನು ಅವರ ಆನೆಯ ತಲೆಯ ಮೇಲಿಟ್ಟು, "ಓಹೋ! ಏನೋ ಸುಳ್ಳು ಹೇಳಲು ಆಲೋಚನೆ ಮಾಡುವಿರೇನು? ನೀವು ಹೇಳುವ ಮಾತಿನಲ್ಲಿ ನನಗೇನಾದರೂ ಸಂಶಯ ಬಂದರೆ ಈ ಆನೆಯ ಕುಂಭಸ್ಥಳವನ್ನು ಒಂದೇಟಿಗೆ ಒಡೆದುಹಾಕುತ್ತೇನೆ. ಆಮೇಲೆ ನಿಮ್ಮ ನಾಲ್ವರ ತಲೆಗಳಿಗೂ ಅದೇ ಗತಿ! ಜಾಗ್ರತೆ! ಇದ್ದದ್ದಿದ್ದ ಹಾಗೆ ಎಲ್ಲಾ ಹೇಳಿಬಿಡಿ!" ಎಂದು ಕಣ್ಣು ಕೆಕ್ಕರಿಸಿ ಹೇಳಿದನು.

ಕೂಡಲೇ ಸೈನಿಕನೊಬ್ಬ ಚುರುಕುಬಿಸಿ ತಗಲಿದವನಂತೆ, "ಹಾಗೇನಿಲ್ಲ. ಭಲ್ಲೂಕಪ್ರಭೂ! ದುರ್ಮುಖ ರಾಜರ ರಾಜಧಾನಿಗೇ ಆಪತ್ತು ಬಂದಿದೆ. ಸೂರ್ಯಭೂಪತಿ ಎಂಬ ಸಾಮಂತರಾಜನೊಬ್ಬ ರಾಜಧಾನಿಯನ್ನು ಆಕ್ರಮಿಸಿ ಕುಳಿತಿದ್ದಾನೆ. ಆಗ ನಡೆದ ಯುದ್ಧದಲ್ಲಿ ಬದುಕಿ ಹೊರಬಿದ್ದ ನಾವು ಮಾತ್ರ ನಮ್ಮ ರಾಜನನ್ನು ಹುಡುಕುತ್ತಾ ಈ ಅರಣ್ಯಕ್ಕೆ ಬಂದೆವು. ಇಷ್ಟೇ ಹೊರತು ಬೇರೆ ಸೈನ್ಯವೂ ಇಲ್ಲ. ಸರಂಜಾಮುವೂ ಇಲ್ಲ. ನಮ್ಮ ರಾಜರಿಗೆ ಅಲ್ಲಿಯೂ ಕಷ್ಟ, ಇಲ್ಲಿಯೂ ಕಷ್ಟ!" ಎಂದನು.



"ಆಹಾ! ನಿಮ್ಮ ರಾಜಭಕ್ತಿ ಮೆಚ್ಚತಕ್ಕಂಥಾದ್ದೇ. ಆದರೆ ನೀವು ಯಾರಿಗಾಗಿ ಇಷ್ಟು ಶ್ರಮಪಟ್ಟಿರೋ ಆ ದುರ್ಮುಖರಾಜನು ಚಂದ್ರಶಿಲಾನಗರವನ್ನು ಆಕ್ರಮಿಸಬೇಕೆಂದು ಹೊರಟು, ದಾರಿಯಲ್ಲಿ ಒಬ್ಬ ದೊಡ್ಡ ಮಾಂತ್ರಿಕನನ್ನೂ, ಕಾಳೀವರ್ಮನೆಂಬ ಮಹಾವೀರನನ್ನೂ ಅವಮಾನಪಡಿಸಿ ಕಷ್ಟದಲ್ಲಿ ಸಿಕ್ಕಿಬಿದ್ದ. ಅವನು ಜೀವದೊಂದಿಗೆ ಉದಯಗಿರಿಯನ್ನು ಸೇರುವುದಿಲ್ಲ ಗೊತ್ತೋ? ನೀವು ಅವನ ಗೊಡವೆ ಬಿಟ್ಟು ಮತ್ತೊಬ್ಬರಾಜನ ಆಶ್ರಯ ಸೇರಿ ಬದುಕಿರಿ. ಹೋಗಿರಿ. ಪಾಪ, ನಿಮಗೇಕೆ ಆ ಗತಿಗೇಡಿಯ ಗೊಡವೆ?" ಎಂದ ಕಟುಕಕರಡೀ ಮನುಷ್ಯ.

ಅವನ ಮಾತುಗಳು ಅರ್ಥವಾಗದೆ ಸೈನಿಕರು ಮತ್ತೆ ಮುಖ ಮುಖ ನೋಡಿಕೊಳ್ಳ ತೊಡಗಿದರು.



ಆಗ ದುರ್ಮುಖಿ ರಾಜನ ಅಂಗರಕ್ಷಕನು ಓಡೋಡುತ್ತ ಅಲ್ಲಿಗೆಬಂದು, "ಕಟುಕಭಲ್ಲೂಕ ಪ್ರಭೋ ! ಹಿಂದೆ ಬರುವ ನಾವೆಲ್ಲಾ ಈ ಕಡೆ ಆನೆಗಳ ಘೀಂಕಾರಗಳನ್ನು ಕೇಳಿ, ನಿಮ್ಮ ಆನೆಯನ್ನು ಕಾಡಾನೆಗಳೇನಾದರೂ ಆಟಕಾಯಿಸಿದುವೇನೋ ಅಂದುಕೊಂಡೆವು, ಎಲ ! ಇದೇನು ? ಇವನಿಗೇ ನಾಯಿತು ? " ಎಂದು ನೆಲದ ಮೇಲೆ ಬೋರ್ಲಬಿದ್ದಿದ್ದ ಆಟವಿಕಯುವಕನನ್ನು ನೋಡಿ, "ಅಯ್ಯಯ್ಯೋ ? ಇವನನ್ನು ಕಾಡಾನೆಗಳು ತುಳಿದು ಕೊಂದು ಹಾಕಿದ ಹಾಗಿದೆ ಪಾಪ! ಯಾವಳು ಹೆತ್ತಮಗನೋ ! " ಎಂದನು.

ಕರಡಿಕಟುಕನು ತನ್ನ ಆನೆಯನ್ನು ಆಟವಿಕಯುವಕನ ಬಳಿಗೆ ಸಾಗಿಸಿ, ಅವನ ಹೊಟ್ಟೆಯ ಪಕ್ಕವು ಏರಿ ತಗ್ಗುವುದನ್ನು ನೋಡಿ ತಲೆಯಾಡಿಸಿ, "ಇವನು ಬದುಕಿಯೇ ಇದ್ದಾನೆ. ಆನೆಯ ಕುಂಭಸ್ಥಳದ ಮೇಲಿನಿಂದ ಬಿದ್ದ ಪೆಟ್ಟಿಗೆ ಮೂರ್ಛೆಬಂದಿದೆ ಅಷ್ಟೇ. ಅವನ ಬೆನ್ನ ಮೇಲೆ ಒಂದೇಟುಕೊಡು. ಪೆಟ್ಟಿಗೆ ಪೆಟ್ಟೇ ಮದ್ದು." ಎಂದನು. "ಹಾಗೇನು ? " ಎಂದು ಅಂಗರಕ್ಷಕನು ತನ್ನ ಅಂಗೈಯಿಂದ ಬಿದ್ದಿದ್ದ ಆಟವಿಕನ ಬೆನ್ನಿಗೆ ಒಂದು ಏಟನ್ನು ಬಾರಿಸಿ, "ಎದ್ದೇಳು ಎದ್ದೇಳು ! ನಿನ್ನ ಯಜಮಾನ ಮಹಾಭಲ್ಲೂಕಯ್ಯ ಕರೆಯುತ್ತಿದ್ದಾನೆ. ಎಷ್ಟು ಹೊತ್ತು ಹೀಗೆ ಬಿದ್ದಿರುತ್ತೀಯಾ ? " ಎಂದು ಕೂಗಿ ಹೇಳಿದನು.

ಕೂಡಲೇ ಆಟವಿಕನು ಎದ್ದುನಿಂತು, ತನ್ನ ಬಿಲ್ಲಂಬುಗಳನ್ನು ಎತ್ತಿಕೊಂಡು, "ಎಲ್ಲಿದ್ದಾರೆ ? ಏನಾಯಿತು ನನ್ನ ದೊರೆಗೆ ? ಕರಡಯ್ಯ ದೊರೆಯನ್ನು ಅಡ್ಡಗಟ್ಟಿದವರು ಎಲ್ಲಿ ? " ಎಂದು ಬಿಲ್ಲಿಗೆ ಬಾಣ ಹೂಡಿ ಆಚೀಚೆ ನೋಡಿದನು.

ಆಗ ಆನೆಯ ಮೇಲಿದ್ದ ಸೈನಿಕರು, "ಅಯ್ಯಾ ! ಅಂಗರಕ್ಷಕ ಪ್ರಭುವೇ ! ನಮಗೊಂದೂ ತೋರಲೋದಿಲ್ಲ. ನಮ್ಮನ್ನು ಕಾಪಾಡಿ, ಕಾಪಾಡಿ ! ನೀವೇ ಗತಿ ! ಶರಣು ! ಶರಣು !" ಎಂದು ಕೂಗುತ್ತಾ, ಆನೆಯ ಮೇಲಿನಿಂದ ಕೆಳಗೆ ಹಾರಿದರು.

ತನ್ನನ್ನು ಅಂಗರಕ್ಷಕನೆಂದು ಕರೆದವರು ಯಾರೆಂದು ಅಂಗರಕ್ಷಕನು ಆಶ್ಚರ್ಯದಿಂದ ಆ ಸೈನಿಕರನ್ನು ನೋಡಿ, "ನೀವೋ ? ಏನಿದು ? ನಗರವನ್ನು ಬಿಟ್ಟು ಈ ಕಾಡಿನೊಳಗೆ ಏಕೆಬಂದಿರಿ ? ಏನಾಯಿತು ? " ಎಂದು ಕೇಳಿದನು.

ಅವನ ಪ್ರಶ್ನೆ ಕೇಳಿ ಕಟುಕಕರಡಿಯವನು ಗಟ್ಟಿಯಾಗಿ ನಕ್ಕು, "ಅದೆಲ್ಲಾ ದೊಡ್ಡ ಕಥೆ, ನಿನ್ನ ದುರ್ಮುಖಿ ರಾಜನ ರಾಜಧಾನಿ, ಕೋಟೆ, ಅರಮನೆಗಳನ್ನು ಯಾವನೋ ಸಾಮಂತರಾಜ ಆಕ್ರಮಿಸಿಬಿಟ್ಟನು. ಹೋದರೆ ಹೋಗಲಿ. ಇನ್ನು ಸ್ವಲ್ಪ ಹೊತ್ತಿಗೆ ತಲೆಯನ್ನೇ ಕಳೆದುಕೊಳ್ಳುವವನಿಗೆ ರಾಜ್ಯವಿದ್ದರೆ ಮಾತ್ರ ಏನು ಪ್ರಯೋಜನವಿದೆ? ಆ ಮಾತು ಬಿಡು," ಎಂದನು.

ಅಷ್ಟರಲ್ಲಿ ಅಲ್ಲಿಗೆ ದುರ್ಮುಖಿ ರಾಜನೂ, ಅವನ ಹಿಂದೆ ಉಗ್ರದಂಡ ರಾಕ್ಷಸನೂ, ನಾಗಮಲ್ಲ ಮೊದ

ಲಾದ ಕಳ್ಳರೂ ಬಂದರು. ದುರ್ಮುಖನು ಬಂದ ಕೂಡಲೇ ತನ್ನ ಸೈನಿಕರನ್ನು ಗುರುತಿಸಿ, "ಅರರೆ! ನೀವೇ! ಏನಿದು? ನೀವೆಲ್ಲಾ ಈ ಅರಣ್ಯಕ್ಕೆ ಏಕೆ ಬಂದಿರಿ?" ಎಂದು ಕೇಳಿದನು.

"ನಾನು ಹೇಳುತ್ತೇನೆ" ಎಂದು ಕಟುಕಕರಡಿಯವನು ಆನೆಯ ಮೇಲಿನಿಂದ ಕೆಳಗಿಳಿದು, "ಇದೇ ಪ್ರಶ್ನೆಯನ್ನೆ ನಿನ್ನ ಅಂಗರಕ್ಷಕನೂ ಅವರನ್ನು ಕೇಳಿದನು. ನಾನೇ ಹೇಳುತ್ತೇನೆ ಕೇಳು. ಅದೇನೂ ಚಿಂತೆ ಮಾಡಬೇಕಾದ ಸಂಗತಿಯಲ್ಲ. ನಿನ ರಾಜಧಾನಿ ಸಾಮಂತ ರಾಜನ ವಶಕ್ಕೆ ಹೋಯಿತು. ನಿನಗೆ ರಾಜ್ಯವೂ ಇಲ್ಲ. ಬದುಕುವ ಪ್ರಯೋಜನವೂ ಇಲ್ಲ." ಎಂದನು.

"ಯಾವ ಹುಲು ಸಾಮಂತನವನು?" ಎಂದು ದುರ್ಮುಖನು ಕೋಪದಿಂದ ಕತ್ತಿ ಝಳಪಿಸಿ ಸೈನಿಕರೊಂದಿಗೆ, "ನನಗಿರುವ ಸಾಮಂತ ಒಬ್ಬನೇ ಒಬ್ಬ. ಆ ಸೂರ್ಯಭೂಪತಿ. ಅವನೇ ಏನು ನನ್ನ ರಾಜ್ಯ ಆಕ್ರಮಿಸಿಕೊಂಡದ್ದು? ನೀವೆಲ್ಲಾ ಹೇಡಿಗಳಾಗಿ ರಾಜ್ಯವನ್ನು ಅವನಿಗೇ ಬಿಟ್ಟುಕೊಟ್ಟು ಓಡಿಬಂದಿರು ವಿರಾ? ನಿಮಗೆಲ್ಲಾ ತೀನಿ ತುಂಬಿಸಿ ಕಾಪಾಡಿದ್ದೆಲ್ಲಾ ವ್ಯರ್ಥ. ಪರಮ ದ್ರೋಹಿಗಳೇ! ನಿಮ್ಮ ತಲೆಗಳನ್ನು ಈಗಲೇ ಕಡಿದುರುಳಿಸುತ್ತೇನೆ" ಎಂದು ಸೈನಿಕರ ಮೇಲೆ ಧುಮುಕಲು ನೋಡಿದನು.

ಆಗ ಉಗ್ರದಂಡ ರಾಕ್ಷಸನು ತಟ್ಟನೆ ಮುಂದೆ ಬಂದು, ದುರ್ಮುಖನ ಕೈ ಹಿಡಿದು ನಿಲ್ಲಿಸಿ, "ದುರ್ಮುಖ ರಾಜಾ! ದುಡುಕಿಬಿಡಬೇಡ. ಮೊದಲು ಕಟುಕ ಕರಡಿ ಮನುಷ್ಯನಿಂದ, ಆ ಮೇಲೆ ಮಹಾಮಾಂತ್ರಿಕನಿಂದ ಹೀಗೆ ಬೀಸಿಕೊಂಡಿರುವ ದೊಣ್ಣೆಯ ಏಟುಗಳಿಂದ ನಿನ್ನ ತಲೆಯನ್ನು ಕಾಪಾಡಿ ಕೊಳ್ಳುವ ಉಪಾಯ ನೋಡು. ಆ ಮೇಲೆ ಬೇಕಾದರೆ ನಿನ್ನ ರಾಜ್ಯ ಕೋಟೆ ಕೊತ್ತಳ ಎಲ್ಲಾ ಉಳಿಸುವ ಮಾತು ನೋಡೋಣ. ನಾವೆಲ್ಲರೂ ನಿನಗೆ ಸಹಾಯಕರಾಗಿರುತ್ತೇವೆ" ಎಂದನು.



ರಾಕ್ಷಸನ ಮಾತು ಕೇಳಿ, ದುರ್ಮುಖನ ಆವೇಶವೂ ದರ್ಪವೂ ಜರ್‍ರನೆ ಇಳಿಯಿತು. ಅವನು ಉಗ್ರದಂಡ ರಾಕ್ಷಸನ ಎರಡು ಕೈಗಳನ್ನು ಹಿಡಿದು, "ರಾಕ್ಷಸ ಪ್ರಭು! ನನಗೆ ಖಂಡಿತವಾಗಿಯೂ ಸಾವೇ ಬರುವ ಹಾಗಿದ್ದರೆ, ಒಂದು ರಾಜ್ಯದ ರಾಜನಾಗಿಯೇ ಸಾಯುವ ಹಾಗೆ ಮಾಡಬೇಕಾದ ಭಾರ ನಿಮ್ಮದೇ. ನಿಮ್ಮ ಸಹಾಯದಿಂದ ದುಷ್ಟನಾದ ಆ ಸಾಮಂತನ ತಲೆಯನ್ನು ಕೋಟೆಯ ಬುರುಜಿಗೆ ನೇತು ಹಾಕಿ, ಆ ಮೇಲೆ ಸಂತೋಷವಾಗಿ ನನ್ನ ತಲೆ ಕಡಿಸಿಕೊಳ್ಳು ತ್ತೇನೆ. ಆ ಕರಡೀ ಕೆಂಗಣ್ಣರ ಸನ್ನಿಧಾನಕ್ಕೆ ನಾನೇ ಬರುತ್ತೇನೆ, ಅಷ್ಟೊಂದು ಆಗುವ ಹಾಗೆ ಮಾಡಬೇಕು." ಎಂದನು.

ದುರ್ಮುಖನ ದುಃಖಾವಸ್ಥೆಯನ್ನು ನೋಡಿ ಉಗ್ರದಂಡ ರಾಕ್ಷಸನಿಗೆ ತುಂಬಾ ಕನಿಕರ ಉಂಟಾಯಿತು. ಅವನು ಕಟುಕಕರಡಿಯವನನ್ನು ನೋಡಿ, "ಎಲೋ, ನರಭಲ್ಲೂಕಾ, ಈ ದುರ್ಮುಖನ ಕೋರಿಕೆ



ಯಲ್ಲಿ ನನಗೇನೂ ತಪ್ಪು ಕಾಣುವುದಿಲ್ಲ. ಎಷ್ಟಾದರೂ ಇಷ್ಟುಕಾಲ ರಾಜನಾಗಿ ಬಾಳಿದವನು. ಸಾಯುವ ಕಾಲದ ಕೊನೆಯ ಕೋರಿಕೆ ತೀರಿಸಬೇಕು ಅನ್ನುತ್ತಾರಲ್ಲವೆ ? ಹಾಗೇ ಮಾಡೋಣವೇನು ? " ಎಂದು ಕೇಳಿದನು.

ಕಟುಕಕರಡಿಯವನು ತುಸು ಯೋಚಿಸಿ, ಅಲ್ಲಿದ್ದ ಎಲ್ಲರನ್ನೂ ಒಮ್ಮೆ ನೋಡಿ, "ನೀವೆಲ್ಲರೂ ಕೂಡಿ ನನ್ನನ್ನು ಮೋಸಪಡಿಸಲು ಗತ್ತುಹಾಕಿಕೊಂಡಿಲ್ಲ ವಷ್ಟೆ?" ಎಂದು ಬೆರಳಿನಿಂದ ಕೊಡಲಿಯ ಹರಿತವನ್ನು ನೋಡಿದನು.

ಅವನು ಕೋಪದಿಂದ ಮೈ ತಿಳಿಯದೆ ಹೋಗುವ ಮೊದಲೇ ಶಾಂತಪಡಿಸಬೇಕೆಂದುಕೊಂಡು ಉಗ್ರದಂಡ ರಾಕ್ಷಸನು ಮುಗುಳು ನಗುತ್ತ ಅವನ ಭುಜದ ಮೇಲೆ ಕೈಹಾಕಿ ಪೂಸುತ್ತ, "ಕೋಪೋಗ್ರನಾದ ಕಟುಕ ಮಾನವನೇ! ನಿನ್ನ ಕೊಡಲಿ ಎಷ್ಟೊಂದು ಹರಿತವೆಂಬುದು ಇಲ್ಲಿ ಎಲ್ಲರಿಗೂ ಗೊತ್ತಾಗಿದೆ. ಒಂದು ಸೂಕ್ಷ್ಮ ವಿಷಯ ಗಮನಿಸಿದೆಯಾ? ನಿನ್ನ ಪೂಜ್ಯ ಗುರುಗಳಾದ ಕರಡಿಕೆಂಗಣ್ಣ ಮಾಂತ್ರಿಕರು ರಾಜನಾದ ದುರ್ಮುಖನ ತಲೆ ತರಲಿಕ್ಕೆ ಹೇಳಿದರೋ, ರಾಜ್ಯವನ್ನು ಕಳೆದುಕೊಂಡ ದುರ್ಮುಖನ ತಲೆಯನ್ನೋ? ಈ ಪ್ರಶ್ನೆ ತುಂಬ ಮುಖ್ಯವಾದುದಲ್ಲವೆನ್ನುವಿಯಾ ? " ಎಂದು ಕೇಳಿದನು.

ಆ ಪ್ರಶ್ನೆಗೆ ಅರ್ಥವಿಲ್ಲವೆಂಬಂತೆ ಕರಡಿಯವನು ತಲೆಯಲುಗಿಸುತ್ತ, "ಉಗ್ರದಂಡಾ ! ನೀನೇನೋ ಮಾತಿನ ಮಡಿಕೆಯಲ್ಲಿ ಧರ್ಮ ಸಂದೇಹವೇನೋ ಎಬ್ಬಿಸುವ ಹಾಗಿದೆ. ಹೇಳುವಂಥಾದ್ದನ್ನು ಸ್ಪಷ್ಟವಾಗಿ ಹೇಳಿಬಿಡು." ಎಂದನು.

"ಹಾಗಾದರೆ ಹೇಳುತ್ತೇನೆ ಕೇಳು. ಈ ದುರ್ಮುಖ ರಾಜನಿಗೆ ತನ್ನ ತಲೆ ಹೋಗುವುದಕ್ಕಿಂದಲೂ ತಪ್ಪಿ ಹೋದ ರಾಜ್ಯವನ್ನು ಕುರಿತೇ ಹೆಚ್ಚು ಚಿಂತೆ ಹಿಡಿದಿದೆ. ಆದ್ದರಿಂದ ದ್ರೋಹಿಯೂ ಕಳ್ಳನೂ ಆದ ಆ ಸಾಮಂತ ಸೂರ್ಯಭೂಪತಿಯನ್ನು ಕೋಟೆಯೊಳಗಿನಿಂದ ಹೊರಗೆ ಹಾಕಿ, ಇವನು ಉದಯಗಿರಿ ರಾಜ್ಯದ ರಾಜನೇ ಅನಿಸಿ, ಆ ಮೇಲೆ ಅವನನ್ನು ಮಾಂತ್ರಿಕ ಮಹಾನುಭಾವರ ಬಳಿಗೆ ಕರೆದುಕೊಂಡು ಹೋಗೋಣ, ಹೀಗೆ ಮಾಡುವುದರಿಂದ ಮಾಂತ್ರಿಕ ಮಹಾನುಭಾವರಿಂದ ಯಾವ ಆಕ್ಷೇಪಣೆಯೂ ಬರಲಾರದು." ಎಂದನು.

ದುರ್ಮುಖರಾಜನು ಎರಡು ಕೈಗಳನ್ನೂ ಜೋಡಿಸಿ, "ಅಯ್ಯಾ ಭಲ್ಲೂಕಪ್ರಭುವೇ! ಕೆಲವೇ ಗಂಟೆಗಳ ಕಾಲದೊಳಗೆ ಈ ಲೋಕ ಬಿಡಲಿರುವ ನನ್ನ ಕೊನೇ ಕೋರಿಕೆಯನ್ನು ಅಲ್ಲಗಳೆಯಬೇಡಿ !" ಎಂದು ಬೇಡಿಕೊಂಡನು.

ಕರಡಿ ಮನುಷ್ಯನು ಒಪ್ಪಿಕೊಂಡವನಂತೆ ತಲೆಯಾಡಿಸಿದನು. ಅಗಲೇ ಆಟವಿಕ ಯುವಕನು ಒಂದು ಬಾಣವನ್ನು ಒಂದು ಮರದ ಬೊಡ್ಡೆಗೆ ತಾಗುವಂತೆ ಪ್ರಯೋಗಿಸಿ, "ಆಹಾ! ಕರಡಿ ದೊರೇ! ಆ ಸಾಮಂತ



ನನ್ನು ನನ್ನ ಬಾಣಕ್ಕೇ ಬಿಟ್ಟುಬಿಡಿ. ಅರಣ್ಯದಲ್ಲಿ ಬೇಟೆಯಾಡಿ ಬದುಕುವ ನನ್ನಂಥವರಿಂದ, ನಾವು ಹೊಡೆದ ಹಕ್ಕಿ ಪಕ್ಕಿಗಳಿಗೆಲ್ಲ ತೆರಿಗೆ ವಸೂಲು ಮಾಡುತ್ತಾನೆ. ಆ ಕ್ರೂರನ ಮೇಲೆ ಹಗೆ ತೀರಿಸಲು ನನಗಿದು ಒಳ್ಳೇ ಸಂದರ್ಭ." ಎಂದನು.

ಆದನ್ನು ನೋಡಿ ಕಳ್ಳರ ನಾಯಕ ನಾಗಮಲ್ಲನು ಕತ್ತಿಯನ್ನು ಮೇಲಕ್ಕೆತ್ತಿ ಆಡಿಸುತ್ತ, "ಆ ಸೂರ್ಯ ಭೂಪತಿ ಎಂಬ ಸಾಮಂತ ಯಾವುದಕ್ಕೂ ಹೇಸು ವವನಲ್ಲ. ದಾರೀ ದೋಚಿ ಬದುಕುವ ನಮ್ಮಿಂದ ಕೂಡಾ ಕದ್ದುಕೊಂಡುದರಲ್ಲಿ ಅರ್ಧಭಾಗ ವಸೂಲು ಮಾಡಿಕೊಳ್ಳುತ್ತಾನೆ. ಆ ದುಷ್ಟನೊಂದಿಗೆ ಹೋಲಿಸು ವಾಗ ಈ ದುರ್ಮುಖ ಮಹಾರಾಜರು ಧರ್ಮ ರಾಜನಂಥವರು" ಎಂದನು.

"ಹಾಗಾದರೆ ಆ ಸಾಮಂತನ ತಲೆಯನ್ನೂ ಕೊಂಡೊಯ್ದು ಮಹಾಮಾಂತ್ರಿಕರಿಗೆ ಸಮರ್ಪಿ ಸೋಣ. ಅವರು ಅಂಥವರ ತಲೆಗಳನ್ನೆಲ್ಲಾ ಸಂಗ್ರಹಿಸಿ ಏನು ಯಜ್ಞಮಾಡುವರೋ! ನಡೆಯಿರಿ. ಉದಯ ಗಿರಿ ಎಷ್ಟು ದೂರದಲ್ಲಿದೆ?" ಎಂದ ಕೇಳಿದ ಕರಡಿಕಟುಕ.

"ಅಡ್ಡದಾರಿಯಲ್ಲಿ ಹೋದರೆ ಅರ್ಧಗಂಟೆ ದಾರಿ ಯಷ್ಟೇ. ನಾನೇ ಮುಂದಿನಿಂದ ದಾರಿ ತೋರಿಸುತ್ತಾ ಸಾಗುತ್ತೇನೆ. ಭಲ್ಲೂಕ ಮಹಾರಾಜರೆ, ನಿಮ್ಮ ವೊಂದು ಸೊಂಡಿಲಿನ ಆನೇ ತಲೇ ಮೇಲೆ ಏರಿ ಕೊಳ್ಳಲೇ?" ಎಂದ ಆಟವಿಕ ಯುವಕ.

ಕರಡಿಕಟುಕನು "ಏರಿಕೋ" ಎಂದು ಹೇಳಿ, ತಾನೂ ಆನೆಯ ಮೇಲೇರಿ ಕುಳಿತನು. ಉಗ್ರದಂಡ ರಾಕ್ಷಸನು ದಂತಮುರಿದ ಆನೆಯ ಮೇಲೆ ದುರ್ಮುಖ ರಾಜನನ್ನು ಎತ್ತಿ ಕುಳ್ಳಿರಿಸಿ, ಕರಡಿಕಟುಕನೊಂದಿಗೆ, "ಭಲ್ಲೂಕ ಮಾನವಾ, ನಿನ್ನನ್ನು ಕೇಳದೆಯೇ ಈ ರಾಜನನ್ನು ಆನೇ ಮೇಲೆ ಕೂಡಿಸಿದೆನೆಂದು ಸಿಟ್ಟಾಗಬೇಡ. ನಿನ್ನ ನೋಡಿ ನಾನೂ ಹೆದರುತ್ತೇನೆ. ಇನ್ನು ಕೆಲವು ನಿಮಿಷಗಳಲ್ಲೇ ರಾಜನಾಗುವವನಿಗೆ ಇಷ್ಟಾದರೂ ಮರ್ಯಾದೆ ಇರಲೀ ಅಂತ ಹೀಗೆ ಮಾಡಿದೆ." ಎಂದನು.

ದುರ್ಮುಖರಾಜನ ಆನೆಯ ಮೇಲೆ ಮತ್ತಿಬ್ಬರು ಸೈನಿಕರು ಏರಿಕೊಂಡರು. ಮತ್ತೊಂದು ಆನೆಯ ಮೇಲೆ ಕಳ್ಳರ ನಾಯಕ ನಾಗಮಲ್ಲನೂ, ಅವನ ಅನುಚರರೂ, ಉಳಿದಿಬ್ಬರು ಸೈನಿಕರೂ ಏರಿ ಕೊಂಡರು. ಹೀಗೆ ಅವರು ಹೊರಟಾಗ, ಉಗ್ರದಂಡ ರಾಕ್ಷಸನು ಕಲ್ಲಿನ ಗದೆಯನ್ನು ಹೆಗಲಿಗಾನಿಸಿಕೊಂಡು, ದೊಡ್ಡ ದೊಡ್ಡ ಹೆಜ್ಜೆಗಳನ್ನಿಡುತ್ತ ನಿಂತು ನಿಂತು ಅವರ ಹಿಂದೆಯೇ ಸಾಗಿದನು.

ಅರ್ಧಗಂಟೆಯ ಮೇಲೆ ಅರಣ್ಯವನ್ನು ಹಿಂದೆ ಹಾಕಿ ಅವರೆಲ್ಲ ಒಂದು ಮೈದಾನ ಪ್ರದೇಶವನ್ನು ಸೇರಿದರು. ಅವರ ಇದಿರಿನಲ್ಲಿ ದೊಡ್ಡದೊಂದು ಕೋಟೆಯೂ, ಅದರ ಹಿಂದೆ ಇರುವ ಭವನಗಳ ಮಾಳಿಗೆಗಳೂ ಕಂಡು ಬಂದುವು. ಅದುವೇ ಉದಯ

ಗಿರಿ ನಗರವೆಂದು ಎಲ್ಲರಿಗೂ ಗೊತ್ತಾಯಿತು. ಆ ಕೋಟೆಯನ್ನು ನೋಡಿದ ಕೂಡಲೇ ದುರ್ಮುಖ ರಾಜನ ಮುಖದಲ್ಲಿ ಚಿಂತೆಯಾವರಿಸಿತು. ಅವನು ಕರಡಿಕಟುಕನೊಂದಿಗೆ, "ಅಯ್ಯಾ ಭಲ್ಲೂಕ ಮಹಾ ರಾಜ! ಈಗ ಆ ದ್ರೋಹಿಯಾದ ಸಾಮಂತನ ವಶದಲ್ಲಿ ಸ್ವಲ್ಪ ಅಶ್ವಸೇನೆಯೂ, ಸ್ವಲ್ಪ ಕಾಲ್ಬಲವೂ ಇದ್ದೇ ಇರುತ್ತದೆ. ಆ ಸೇನೆಯನ್ನು ಇದಿರಿಸಲಿಕ್ಕೆ ನಮ್ಮಲ್ಲಿ ಈಗ ಹತ್ತುಮಂದಿ ಕೂಡಾ ಇಲ್ಲವಲ್ಲಾ? ಇಂತಹ ಸಂದರ್ಭದಲ್ಲಿ ನಮಗೆ ಒಳಗೆ ಹೋಗಲು ಸಾಧ್ಯವಾದೀತೆ? ಹೇಗೆ ವಿಜಯ ಸಾಧಿಸು ವುದೋ?" ಎಂದನು.

"ಈ ಅನುಮಾನ ಈಗ ಬರುತ್ತದೇನು ನಿನಗೆ?" ಎಂದು ಕರಡಿಕಟುಕ ಕಣ್ಣು ತಿರುಗಿಸಿ, ತನ್ನ ಚಪ ಗೊಡಲಿಯನ್ನು ಮೇಲೆತ್ತಿ, "ಇಲ್ಲಿ ಮುಂದೆ ಬಾರಯ್ಯ ಉಗ್ರದಂಡಾ!" ಎಂದು ರಾಕ್ಷಸನನ್ನು ಕರೆದು, ದುರ್ಮುಖನಿಗೆ ಬಂದ ಸಂದೇಹವನ್ನು ಕುರಿತು ಹೇಳಿದನು.

ಉಗ್ರದಂಡ ರಾಕ್ಷಸನು ಕಲ್ಲಿನ ಗದೆಯನ್ನು ನೆಲಕ್ಕೆ ಒಡೆದು, "ಅದಕ್ಕೇಕೆ ಸಂದೇಹ? ನಿನ್ನ ಚಪ ಗೊಡಲಿಯೂ, ನನ್ನ ಗದೆಯೂ ಎಷ್ಟುಮಂದಿ ಸೈನಿಕರನ್ನಾದರೂ ಹತಮಾಡಬಲ್ಲುವು. ಸುಮ್ಮನೇ ರಕ್ತಪಾತವಾಗದಂತೆ, ನಗರವನ್ನು ದುರಾಕ್ರಮಣ ಮಾಡಿದ ಆ ಸಾಮಂತನನ್ನು ಹಿಡಿದು ತಲೆ ಹಾರಿಸುವ ದಾರಿ ಏನಾದರೂ ಇದ್ದರೆ ಒಳ್ಳೇದು. ಸುಮ್ಮನೆ ಪಾಪದ ಸೈನಿಕರನ್ನೆಲ್ಲಾ ಕೊಲ್ಲದಿರುವ ಆಲೋಚನೆ ಯಿದ್ದರೆ ಹೇಳಿರಿ!" ಎಂದನು.

ರಾಕ್ಷಸನ ಮಾತು ಕೇಳಿ ಕಳ್ಳರೊಡೆಯ ನಾಗ ಮಲ್ಲನು ಆನೆಯ ಮೇಲೆ ಎದ್ದು ನಿಂತು, "ಅಂತಹ ದಾರಿಯನ್ನು ಆಗನಿಂದಲೇ ನಾನು ಆಲೋಚಿಸಿ ಕೊಂಡಿದ್ದೇನೆ. ನಾನೂ ನನ್ನ ಅನುಚರರಿಬ್ಬರೂ ಮುಂದೆ ಹೋಗಿ, ಅವನ ಶತ್ರು ದುರ್ಮುಖ ರಾಜರನ್ನು ಬಂಧಿಸಿ ತಂದಿದ್ದೇವೆ. ಅದಕ್ಕಾಗಿ ಬಹುಮಾನ ಕೊಡಬೇಕೆಂದು ಕೇಳುತ್ತೇವೆ. ಆಗ ಅವನೇ ಕೆಲಮಂದಿ ಅಂಗರಕ್ಷಕರೊಂದಿಗೆ ಇಲ್ಲಿಗೆ ಬರಬಹುದು." ಎಂದನು.

"ಇದು ಒಳ್ಳೇ ಆಲೋಚನೆ. ಉರುಳು ಚೆನ್ನಾಗಿ ಮಾಡಿಟ್ಟಿರುವಿ. ಹುಂ, ಹೊರಡು ಹಾಗಾದರೆ" ಎಂದ ಉಗ್ರದಂಡ ರಾಕ್ಷಸ.

ನಾಗಮಲ್ಲನೂ ಅವನ ಅನುಚರರೂ ಆನೆಯನ್ನು ದೌಡಾಯಿಸುತ್ತ ಕೋಟೆಯ ಕಡೆಗೆ ಸ್ವಲ್ಪದೂರ ಹೋದರಷ್ಟೇ: ಆಗ ಅಕಸ್ಮಾತ್ತಾಗಿ ಕೋಟೆಯ ಮಹಾದ್ವಾರವು ಒಮ್ಮೆಗೇ ಅಗಲಕ್ಕೆ ತೆರೆದು ಕೊಂಡಿತು. ಒಳಗಿನಿಂದ ಕೆಲಮಂದಿ ಅಶ್ವಿಕರೂ, ಸೈನಿಕರೂ ಹೊರಗೆ ಬರತೊಡಗಿದರು.

